# ತುತೂರಿ.

ಶ್ರೀಮಾನ್ ಗು. ಭೀ. ಜೋಶಿ.
ಎಮ್. ಎ ಬಿ. ಟಿ. ಅವರ
ಮುನ್ನುಡಿಯೊಡನೆ.

( ಪಂಚಾಕ್ಷರಯ್ಯ ಹಿರೇಮಠ )

೧೯೩೭.

ಬೆಲೆ ಎಂಟು ಆಣೆ.

# ಮುನ್ನುಡಿ.

ಕಾವ್ಯಕ್ಕೆ ಮುನ್ನುಡಿಯನ್ನು ಬರೆಯುವದೆಂದರ ಕವಿಗೆ ಕೈಗನ್ನಡಿಯನ್ನು ಹಿಡಿದಂತೆಯೇ. ಕವಿಯ ಪ್ರತಿಭಾ, ಶೈಲಿ, ವಿಷಯಸಂಗ್ರಹ, ಅನುಭವ ಅರ್ಥಾತ್ ಅವನ ವೈಶಿಷ್ಟ್ಯವನ್ನು ವ್ಯಕ್ತಗೊಳಿಸಿ ಕಾವ್ಯದ ರಸವನ್ನು ಅನುಭವಿಸುವ ಪ್ರಯತ್ನವು. ಪಕ್ವ ಕವಿಯಲ್ಲಿ, ಒಂದುರೀತಿಯಿಂದ ನೋಡುವರೆ, ಈ ಪ್ರಯತ್ನವು ಸುಲಭವು. ಅಪಕ್ವ ಕವಿಯಲ್ಲಿ ಈ ಕಾರ್ಯವು ಬಹು ಕಠಿಣವಾದದ್ದೆಂದು ನನ್ನ ಮನವರಿಕೆಯು.

ಆದುದರಿಂದ ಹಿಂದಕ್ಕೆ ಹೋದ ದೊಡ್ಡ ಆಂಗ್ಲ ಕವಿಗಳ ಪ್ರಥಮಪ್ರಯತ್ನವನ್ನು ಎಷ್ಟೋ ಜನರು ಅಲ್ಲಗಳೆದಿದ್ದರೂ, ಮುಂದೆ ಅವರು ಮಹಾ ಕವಿಗಳಾದರು. ಎಷ್ಟೋ ಚಿಕ್ಕಪುಟ್ಟ ಕವಿಗಳ ಮೊದಲು ಬರೆದ ಕಾವ್ಯಗಳನ್ನು ಮುಕ್ತಕಂಠದಿಂದ ಹೊಗಳಿದ್ದರೂ ಮುಂದೆ ಆ ಕವಿಗಳ ಹೆಸರುಗಳು ಮೂಲೆಯಲ್ಲಿ ಸೇರಿದವು. ಯಾಕೆಂದರೆ ಅರಳಿದ ಹೂವಿನ ವಾಸನೆಯನ್ನೂ ವರ್ಣವನ್ನೂ ಮಾನವನ್ ಅನುಭವಿಸಬಹುದು. ಅರಳದ ಹೂವಿಗೆ ಇಂತಹ ವಾಸನೆಯು, ಬಣ್ಣವು, ಸೌಂದರ್ಯವು ಮುಂದೆ ಬರುವವು ಎಂದು ಹೇಳುವದು ಸಾಹಸದ ಮಾತು. ಮೊಗ್ಗೆಯು ಬಾಡಬಹುದು ಕಲುರ್ಬೀಳಬಹುದು. ಇಂತಹ ಕವಿಗಳ ಭವಿಷ್ಯವು ಗೂಢವಾಗಿರುವದು.

ಆದರೂ ಉಪನಿಷತ್ತಿನಲ್ಲಿ ಸತ್ಯದ ವಿಷಯದಲ್ಲಿ ಹೇಳಿದಂತೆ ಕಾವ್ಯದ ವಿಷಯದಲ್ಲಿ ಸಹ "ಭಂಗಾರ ಮುಚ್ಚಳವು ಮುಚ್ಚಿರುವದು." ಅದರಿಂದ ಒಳಗಿನ ತತ್ವವನ್ನು ಗುರುತಿಸಬಹುದು. ಹೀಗೆ ಈ ಯುವಕ ಕವಿಯಲ್ಲಿ ಥಳಥಳ ಹೊಳೆಯುವ ಪದಾರ್ಥಗಳು ಅಲ್ಲಲ್ಲಿ ವಸರಿಸಿವೆ.

ಧಾರ್ಮಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಕುಂದುಕೊರತೆಗಳು ಈ ಯುವಕನ ಮನಸಿಗೆ ಹತ್ತಿ, ಅವನು ಒಂದು ಬಂಡನ್ನೇ ಎಬ್ಬಿಸಿದ್ದಾನೆ. "ಅಪ್ಪಹೇಳುವದೆಲ್ಲ ಮೇರುಪರ್ವತವಂತೆ । ಮೀರಿನಡೆವರಿಗೆಲ್ಲ ನರಕಸಿದ್ಧವೆ ಅಂತೆ" "ಯುವಕರೆಲ್ಲರ ಧರ್ಮ ಅವಿಚಾರವಹುದಂತೆ"! ಬಡವನಗೋಳು, ಧರ್ಮದ ಆಡಂಬರ, ರಾಜಕೀಯ ಅನ್ಯಾಯ, ಸಾಮಾಜಿಕ ದಬ್ಬಾಳಿಕೆ, ಶಿಕ್ಷಣದ ನಿಷ್ಫಲತೆ ಇವುಗಳಿಂದ ಭರತಭೂಮಿಯು ಪೆಟ್ಟುತಿಂದ ಹೆಣ್ಣುಮಗಳಂತೆ, ವಿಷಣ್ಣವಾಗಿದೆ. ಈ ವಿಷಣ್ಣತೆಯಿಂದ ಎದ್ದೇಳಲಿಕ್ಕೆ ಬೇಕಾದ ಧರ್ಮ, ಶಿಕ್ಷಣ, ಸಮಾ

ಜನರಿಷ್ಟು ಬೇಕಾಗಿದೆ. ಈ ಯುವಕನು ಈ ದುಸ್ಥಿತಿಯಿಂದ ಕಸಿವಿಸಿ ಒಟ್ಟು ಪಟ್ಟ ಬಿಟ್ಟುಸಿರು ಇದು. ಕಂಗಾಲಾಗಿ ಬಂದು ಎಬ್ಬಿಸುವ ತುತೂರಿ ಇದು

ಜನಸಾಮಾನ್ಯತೆಯ ಮೆಚ್ಚುಗೆಯ ಸಲುವಾಗಿ ಕೆಲವು ಕವಿಗಳು ಅವರಿಗೆ ಬೇಕಾದ ರಾಜಕೀಯ ಮಾತುಗಳನ್ನೇ ಕಾವ್ಯದಲ್ಲಿ ತುಂಬುವಂತೆ, ಈ ಬಾಲಕವಿಯು ನವ ರಾಜಕೀಯ ತಂತಿಗಳನ್ನೇ ಮೇಲೆ ಮೇಲೆ ಹೂಡಿ ಹಲವೆಡೆ ಕಾವ್ಯದ ಅಭಿಮಾನವನ್ನು ನಷ್ಟ ಮಾಡಿರುವನು. ಆದರೂ " ನನ್ನೆದೆಯ ದನಿ ನುಡಿಸಿದುದ ಮೂಡಿಸಿದೆ " ಅದರಿಂದ ಇವರಲ್ಲಿ ಸಹಜತೆ ಸರಳತೆ ಇರುವದರಿಂದ ಆ ಕುಂದು ಅಷ್ಟು ಎದ್ದು ಕಾಣುವದಿಲ್ಲ.

ಈ ಕವಿಯ ಆಸೆಯೂ ಆಕಾಂಕ್ಷೆಯೂ ಉದಾರ ಮತ್ತು ಉದಾತ್ತವಾಗಿರುವವು. " ಕವಿಕಂಠೀರವರ ಕೀರ್ತಿಯನೆ ಬಯಸಿಲ್ಲ ... ...ಜೀವನವುಸಿರುಭಾವದಿ ಬೆರೆತು ಹಾಡಿದುದು. "

ಸಹಜವಾದ ಶಬ್ದರಚನೆ, ತಡೆಯಿಲ್ಲದ ಕಾವ್ಯದ ಓಘ, ವಿಚಾರದ ಹೊಳಪು ಇವುಗಳಿಂದ ಈ ಕವಿಯ ಪುಟ್ಟ ಕಾವ್ಯಗಳು ಹಲವು ಸ್ಥಳಗಳಲ್ಲಿ ಹೃದಯಂಗಮವಾಗಿರುವವು. ಹಲಕೆಲವು ಕಾವ್ಯಗಳು ಮಾತ್ರ ಸಂಖ್ಯಾಪೂರ್ತಿಯೊಂದನ್ನು ಬಿಟ್ಟು ಉಳಿದ ಯಾವಕೆಲಸವನ್ನೂ ಮಾಡುವದಿಲ್ಲ.

ಈ ಯುವಕನ ಆದರ್ಶಕವಿಗಳ ಆರಾಧನೆಯು ಬಹಳ ಚನ್ನಾಗಿ ಆಗಿರುವದು. ಆಧುನಿಕ ಕವಿಗಳ ಬೆಡಗು, ನುಣುಪು ಇವನಲ್ಲಿ

ಇಳಿದುಬಂದಿವೆ. ಕೆಲವೆಡೆಯಲ್ಲಿ ಈ ಸ್ಮೃತಿಯ ಬಹುಭಾಗವು ಮೂಲಕ್ಕೆ ಮುಟ್ಟುತ್ತದೆ. ಅನುಕೃತಿಯಗಿಂತ ಸ್ಮೃತಿಯು ಹೆಚ್ಚಾಗಲೆಂದು ಹಾರೈಸುತ್ತೇನೆ.

ಗದಗ.
ವೈಶಾಖ ಶುದ್ಧ ೧೨
ಶಕೆ ೧೮೫೯

ಗು. ಭೀ. ಜೋಶಿ.

ಈ ಪುಸ್ತಕದ

ಕಾಗದ, ರಟ್ಟುಗಳ

ವೆಚ್ಚವಹಿಸಿದ

ಶ್ರೀ. ದೊಡ್ಡಮೇಟಿ

ಅಂದಾನಪ್ಪನವರಿಗೆ

**ಅಭಿನಂದನೆಗಳು !**

ಕಾವ್ಯಪ್ರೇಮಿಯಾದ

ನನ್ನ

ಅಣ್ಣನಿಗೆ

**ಅರ್ಪಣ.**

# ಸರಸ್ವತಿಗೆ.

ತಿಳಿಗೊಳದ ತೀರದಿಹ ತನಿಗಲ್ಲ ಗದ್ದುಗೆ-
ಯನೇರಿ ಸರದ ಸುಯ್ಯನೆ ಶ್ರುತಿಯಲ್ಲಿ
ಕೋಕಿಲ, ಶುಕ, ರವಂಗಳ ಒಮ್ಮೇಳದಲಿ
ನವಿಲು ನೃತ್ಯಕೆ ತಾಳ ಮೇಳೈಸಿ
ವೀಣಾತರಂಗ ತನ್ತ್ರಿಯೊಳ್ ತಾಯೆ
ತರವೇನೆ ನಿನಗೀಪರಿಯು ?
ಕನ್ನಡ ತಾಯ ತಾಪತ್ರಯಂಗಳಂ
ಎವೆಯಿಕ್ಕದನುದಿನ ನೋಡಿ ನೋಡಿ
ಸಂಗೀತ ಸಾಗರದೀಜುಬಿದ್ದೇಳುತಿಹ.
ದೇವಿ, ಸರಸ್ವತಿದೇವಿ, ವಾಗ್ದೇವಿ,
ಬ್ರಹ್ಮದೇವನರಾಣಿ, ವೀಣಾಪಾಣಿ,
ಕೀರ್ವಾಣಿ, ಕವಿಶ್ರೇಣಿ ಕಲ್ಯಾಣಿ
ನಿನ್ನ ನಾನನವರತ ಭಜಿಸಲೇಕೆ?
ಸಪ್ತಸಾಗರಗಳಭಿಷವಂ ಗೈದು
ಮೂರ್ತ ಮಾರ್ತಾಂಡ ಚಂದ್ರಮಾತೀಡಿ
ಕಾನನೋದ್ಯಾನ ಕುಸುಮಗಳ ಚೆಲ್ಲಿ
ಸುಪ್ರಭಾತ ಸುಮಂಗಲ ಪಾಡಿ
ಕುಣಿದು ಕೊಂಡಾಡಿ ಪೂಜಿಸಲೇಕೆ ?
ಬಾ ಹೊರಗೆ ವೀಣೆಯನಿಟ್ಟು ವಿಶ್ರಾಂತಿ
ಕೊಟ್ಟು, ಕೆಲಕಾಲ ಖಡ್ಗಪಾಣಿನಿಯಾಗಿ.

ಮಲ್ಲಗಚ್ಚೆಯ ಹಾಕಿ ಬಾ ಬೆಂಗಾವಲಾಗಿ.
ಮೂಜಗಕೆ ಗಂಡ ಭೇರುಂಡ ಗಾಂಡೀವಿ-
ಪುತ್ರಾಭಿಮನ್ಯು ಚಕ್ರವ್ಯೂಹವನೆ
ಭೇದಿಸಿದ ಬಾಣದ ಶಕ್ತಿ ಬಹುದೆನ್ನ
ಗಲುಗಿಗೆ. ಮೌಢ್ಯಕೋಟೆಯ ಕೆಡಹಿ
ನಾಡಗುಡಿ ಕಟ್ಟುವೆನು. ಕನ್ನಡ ತಾಯ
ತಣಿಸುವೆನು. ನುಡಿದೇವಿ ನುಡಿಸಾಗ
ನಿನ್ನ ವೀಣೆಯನು ತೋಷದಾಕಾಶದಲಿ.



# ನನ್ನ ಕವಿತೆ.

ಬಿಚ್ಚುಗನ್ನಡದಿ ಬರೆವ ಕವಿತೆಗಳ ಕಂಡು
ಕಟ್ಟಳೆಗೆಟ್ಟ ಕುಲಗೇಡಿಯೆಂಬಭಿಧಾನವಿತ್ತು
ಮನಸಾರೆ ನಗುವಿಯೇತಕೆ ಅಣ್ಣಾ ? ನೀ
ನಗುವಿಯೆಂಬುದ ಮರೆತು ನಾ ಕವಿತ ಕಟ್ಟಿಲ್ಲ.
ನೀ ' ಕವಿತೆ 'ಯೆನಲೆಂದು ಕವಿತೆ ಬರೆದಿಲ್ಲ.
ಕವಿಕಂಠೀರವರ ಕೀರ್ತಿಯನೆ ಬಯಸಿಲ್ಲ.
ನನ್ನೆದೆಯ ದನಿ ನುಡಿಸಿದುದ ಮೂಡಿಸಿದೆ.
ಜೀವನದುಸಿರು ಭಾವದಿ ಬೆರೆತು ಹಾಡಿದುದು.
ಭೂಗರ್ಭವನೆ ಸೀಳಿ, ಭೂತಲ ಕಂಡು
ಬೀಜಗಳ ಬಿತ್ತಿ ಬೆಳೆಕೊಂಡು, ಜಗದ ಬಾ-
ಯ್ಗಿಟ್ಟು, ಹೊಟ್ಟೆಗಿಲ್ಲದೆ ಕೆಟ್ಟು, ಕಣ್ಣೀರ
ಸುರಿಸುತಿಹ ಕಂಗಾಲನೊಡಲನೊಳಸೇರಿ
ನೆತ್ತರದ ನಾಡಿಗಳನದುಮಿ ದನಿಗುಡಿಸಿ
ಹಾಡಿದೆನು; ಹಾಡುತಿಹೆ; ಹಾಡುವೆನು.
ಅಪರಾಧವೇನಿದರೊಳಗೆ ನಗುವ ಅಣ್ಣಾ ?
ಕವನದ ಗುಟ್ಟು ಕಟ್ಟಿನೊಳಗಿಲ್ಲವೆಂಬುದ-
ನರಿದು ನಿರ್ಬಲರ ನಗುವ ನಿಲ್ಲಿಸಿ ಬಾ ಸಡ್ಡು-
ಹೊಡೆ. ನನಗು ಮಿಗಿಲೆನಿಪ ಕವಿತೆಗಳ
ಕಟ್ಟು. ಆಗೆನ್ನ ಕಂಡು ಮನದಣಿಯೆ
ನಗು; ನಿನ್ನ ನಗುವಿಗೆ ಬಹುದು ಬೆಲೆ.

# ಕುರುಡನ ಕೂಗು.

ಕತ್ತಲು, ಕತ್ತಲು, ಸುತ್ತಲು ಕವಿದಿದೆ
ಬೆಳಕೆಂಬುವದನು ತೋರುವಿರಾ ?
ಅಪಾರ ಗಗನವು ಇರತಿಹುದಂತೆ !
ತಾರಾಗಣದಿಂ ತೋರುವುದಂತೆ !
ಕಾರ್ಮೋಡಗಳಿಂ ಮುಸುಕಿಹುದಂತೆ !
ಚಂದ್ರ ಸೂರ್ಯರಲ್ಲಿರುತಿಹರಂತೆ !
ಜಗವನು ಬೆಳಗಲು ನಿಂದಿಹರಂತೆ !
ರಾಹು ಕೇತುಗಳು ಪೀಡಿಪವಂತೆ !
ಇಲ್ಲದ ಸೌಖ್ಯವು ಅಲ್ಲಿಹುದಂತೆ !
ಕಣ್ಣುಗಳಿಲ್ಲದ ಕುರುಡನು ನಾನಿಹೆ,
ಕತ್ತಲು, ಕತ್ತಲು, ಸುತ್ತಲು ಕವಿದಿದೆ
ಬೆಳಕೆಂಬುವದನು ತೋರುವಿರಾ ? ॥ ೧ ॥

ಭಾರತ ನಾಡೊಂದಿರುತಿಹುದಂತೆ !
ಹಳ್ಳಿಗಳಿಂದದು ತುಂಬಿಹುದಂತೆ !
ಕಷ್ಟದಿ, ತಾಪದಿ, ಬಳಲುವುದಂತೆ !
ಗಾಂಧಿ, ಜವಾಹರರಿರುತಿಹರಂತೆ !
ದೀನೋದ್ಧಾರಕೆ ಹೆಣಗುವರಂತೆ !
ಅರಿಗಳ ತಾಪವ ಸಹಿಸುವರಂತೆ !
ರಾಟೆಯ ತಿರುಹಲು ಬೋಧಿಪರಂತೆ !
ಹೊಲೆಯರ ಮುಟ್ಟಲು ಹೇಳುವರಂತೆ !

ಸ್ವಾತಂತ್ರ್ಯವ ಸಲೆ ಗಳಿಸುವರಂತೆ !
ಕಣ್ಣುಗಳಿದ್ದೂ ಕುರುಡನು ನಾನಿಹೆ,
ಕತ್ತಲು, ಕತ್ತಲು, ಸುತ್ತಲು ಕವಿದಿದೆ
ಬೆಳಕೆಂಬುವದನು ತೋರುವಿರಾ ? ॥ ೨ ॥



# ಮಿಂಚು.

ಮಿಂಚು ಬಾರೆ ಮಿಂಚು ರಾಣಿ !
ಮುದ್ದು ಮೊಗವ ತೋರೆ ಜಾಣೆ !!
ಮುಗಿಲಿನಲ್ಲಿ ಮಲಗಿಕೊಂಡು
ಮೋಡಗಳಲಿ ಮುಸುಕಿಕೊಂಡು
ಸೂರ್ಯನಿಲ್ಲದ ಸಮಯದಲ್ಲಿ
ಕತ್ತಲೇರುವ ಕಾಲದಲ್ಲಿ
ಕಣ್ಣು ಮುಚ್ಚಲು ಕಾಣಿಸಿಕೊಳ್ಳುವಿ !
ಕೈಯಚಾಚಲು ಕಾಲುತೆಗೆಯುವಿ !
ಮಿಂಚು ಬಾರೆ ಮಿಂಚು ರಾಣಿ !
ಮುದ್ದು ಮೊಗವ ತೋರೆ ಜಾಣೆ !!
ಮುತ್ತಿನ ಮೂಗುತಿಯಿಟ್ಟುಕೊಂಡು
ಜರದ ಕುಪ್ಪಸ ತೊಟ್ಟುಕೊಂಡು
ಹೊಳೆವ ಸೀರೆಯನುಟ್ಟುಕೊಂಡು
ಚಕ್ಕಪಕ್ಕನೆ ಕಾಣಿಸಿಕೊಂಡು
ಕಳ್ಳಕುಣಿತವ ಕುಣಿಯುತಿಹೆ !
ಕಣ್ಣುಸನ್ನೆಯ ಮಾಡುತಿಹೆ !
ಮಿಂಚು ಬಾರೆ ಮಿಂಚು ರಾಣಿ !
ಮುದ್ದು ಮೊಗವ ತೋರೆ ಜಾಣೆ !!
ಏನ ಹುಡುಗಿ ನಿನ್ನ ಮಿಂಚು
ನಿನ್ನಗಾಗಿ ಹಾಕಿ ಹೊಂಚು

ಕತ್ತಲಲ್ಲಿ ತಿರುಗಿ ತಿರುಗಿ
ಮನಸಿನಲ್ಲಿ ಮರುಗಿ ಮರುಗಿ
ನೊಂದೆ ಬೆಂದೆ ಬಾರೆ ಮಿಂಚು !
ತರುಣ ಹೃದಯದಲ್ಲಿ ಮಿಂಚು !
ಮಿಂಚು ಬಾರೆ ಮಿಂಚು ರಾಣಿ !
ಮುದ್ದು ಮೊಗವ ತೋರ ಜಾಣೆ !!

[illegible]

# ಓಡುತೆ ಬಾ! ಬಾ!

೧.

ಮೂಡಣ ದಿಶೆಯಲಿ
ಪಡುವಣ ದಿಶೆಯಲಿ
ಮೂಡುವ ಅಡಗುವ
ರವಿ ಹೊಂಬಣ್ಣವ
ಭರದಲಿ, ಹರುಷದ
ಹೊಗಳುತಲಿರುತಿರೆ ಕವಿಜನರು;
ಚೆನ್ನೆಯ ಸಿನ್ನೆಯು
ಕನ್ನಡಿ ಹೊಳಪಿನ
ಕನ್ನೆಯ ಮೇಲಣ
ಕೆಂಬಣ್ಣವ ನಾ
ಹೊಗಳುತ ನಿಂತಿಹೆ
ಓಡುತೆ ಬಾ! ಬಾ! ಹಾರುತೆ ಬಾ! ಬಾ!

೨.

ಸರದಲಿಶೋಭಿಪ
ಅರಳಿದಕಮಲಕೆ
ಗುಂಗೀಹುಳಗಳು
ಮಕರಂದವ ಸಲೆ
ಸೇವಿಸಲೆಂದುಂ ಧಾವಿಪ
ನೋಟವ ಬಣ್ಣಿಸುತಿರಲಾ ಕವಿಜನರು;

ಸರಸಿಜವದನೆಯೆ
ನನ್ನಯಪ್ರೇಮದ
ಗುಂಗೀಹುಳವದು
ನಿನ್ನಯ ಅಧರಾಮೃತವಂ
ಸೇವಿಸೆ ಧಾವಿಸಿ
ದಣಿದಿದೆ ಬಾ! ಬಾ! ತಣಿಸಲು ಬಾ! ಬಾ!

೩.

ಬೆಳಗಿನಜಾವದಿ
ತೋಟದನೋಟ!
ಪರಿಮಳಬೀರುವ
ಪೂಗಳನೋಟ!
ಕುಣಿಕುಣಿದಾಡುವ
ನವಿಲಿನ ನೋಟವದೆಲ್ಲವು ಕವಿಜನಕಿರಲಿ;
ರಮಣಿಯೆ ನನಗಿದೆ
ನಿನ್ನಯ ನೋಟ!
ಅದದೋ ಅಲ್ಲಿದೆ
ಪ್ರೇಮದ ತೋಟ!
ಸುಂದರಿ ನಲಿಯಲು
ಓಡುತೆ ಬಾ! ಬಾ! ಹಾರುತೆ ಬಾ! ಬಾ!

೪

ರಮಣಿಯೆ ನೋಡದೊ
ಹಿರಿಯರು ನೀಡಿದ
ಗಾಂಧಿಯು ಬಯಸುವ

ಪಾವನ ರಾಟೆಯು
ಹಿಂದಕೆ ಒಗೆವುದೆ?
ಬಾ! ಬಾ! ತಿರುಹಲು ಬೇಗನೆ ಬಾ! ಬಾ!
ನೂಲನುತೆಗೆದಿಡು!
ಮಗ್ಗವಹೂಡುವೆ!
ವಸ್ತ್ರವಮಾಡುವೆ!
ಬಡವಗೆನೀಡಲು
ಪುಣ್ಯವಪಡೆಯಲು
ಓಡುತೆ ಬಾ! ಬಾ! ಹಾರುತೆ ಬಾ! ಬಾ!

೫

ಕಮಲಿನಿ ಬೇಕು;
ನನ್ನಯಬಲವದು
ನಿನಗಿರಬೇಕು;
ನಿನ್ನಯಬಲವದು
ನನಗಿರಬೇಕು;
ಈರ್ವರ ಬಲವದುದೇಶಕೆಬೇಕು;
ಕನ್ನಡಮಾತೆಯು
ಭಾರತಮಾತೆಯ
ಸೇವೆಯಗೈಯುತೆ
ಪ್ರೇಮದಲೀರ್ವರು
ಸಗ್ಗಕೆಪೋಗುವಾ!
ಓಡುತೆ ಬಾ! ಬಾ! ಹಾರುತೆ ಬಾ! ಬಾ!

# ಬಡಭಾರತಿಗೆ.

ಏನುಬೇಡಲಿ ಬಂದು ಭಾರತಿಯೆ ನಿನ್ನ ।
ಮಾನವಂತಿಯೆ ಜನನಿ ಸಲಹು ನೀನೆನ್ನ ॥ಪಲ್ಲ॥

ಬಂಗಾರ ಬೇಡುವೆನೆ ಬಳಿದೆಲ್ಲ ಪೋಗಿಹುದು ।
ಶೃಂಗಾರ ಬೇಡುವೆನೆ ಶಿವನ ಮನೆಯು ॥
ಮಂಗನಂತಿಹ ಮನವು ಇಂಗಿತವನರಿಯದಲೆ ।
ಅಂಗಹೀನನ ತೆರದಿ ತಿರುಗುವದಕಂಡು ॥ ೧ ॥

ಅನ್ನವನು ಬೇಡುವೆನೆ ನಿನ್ನೆನಿನಗುಪವಾಸ ।
ಅಣ್ಣನನು ಕೇಳುವೆನೆ ವನವಾಸವವಗೇ ॥
ಇನ್ನೊಂದುಗಳಿಗೆಯನು ಬಾಳಿಕಳೆಯೆನುಯೆಂದು
ಸನ್ನುತಾಂಗಳೆ ನಿನ್ನ ನಾ ಜವದಿ ಕಂಡು ॥ ೨ ॥

ಬೇಡುವೆನೆ ಸ್ವಾತಂತ್ರ್ಯ ಬಳಲುತಿಹಿ ಬಂಧನದಿ ।
ಆಡುವೆನೆ ಸವಿಮಾತ ಅಳುತಿರುವಿ ತಾಯೇ ॥
ಪೊಡವಿಯೊಳು ಒಡಲುರಿಯು ಸುಡುತಿಹುದು ತಡೆಯದಲೆ ।
ಪೊಡಮಡುವೆ ಗಡಬಂದು ಸಲಿಪೊರೆವುದೆಂದು ॥ ೩ ॥



# ಭೂಲೋಕ-ಯಮಲೋಕ.

ಇದುವೇ ಪಾಪಿಯ ಯಮಲೋಕ!
ಭಾವಿಕರೆಂಬರು ಭೂಲೋಕ!

ದೈತ್ಯರೆಂಬವರ ಕರೆಕಳಿಸಿ
ಹೊಟ್ಟೆಗೆಂಬವರ ಹಿಡಿದೆಳಿಸಿ
ಮುಟ್ಟದೆ ಮೈದೊಗಲನು ಸುಲಿಸಿ
ಕಟ್ಟಿಗೆಯಿಲ್ಲದೆ ಕರುಳನು ಸುಡಿಸಿ

ಇದುವೇ ಪಾಪಿಯ ಯಮಲೋಕ!
ಭಾವಿಕರೆಂಬರು ಭೂಲೋಕ!

ಒಕ್ಕಲಮಕ್ಕಳ ಹಿಡಿದೆಳೆದು
ಸಾಲದಪಾಶದಿ ಬಿಗಿಬಿಗಿದು
ಹೊಟ್ಟೆಯಹೊದಿಕೆಯ ಹರಿದೊಗೆದು
ಬಿಸಿನೆತ್ತರವನೆ ಸುರಿಸುರಿದು

ಇದುವೇ ಪಾಪಿಯ ಯಮಲೋಕ!
ಭಾವಿಕರೆಂಬರು ಭೂಲೋಕ!

ಹೆಣ್ಣಿನಜಾತಿಯ ಹೆಡಮುರಿಕಟ್ಟಿ
ಧರ್ಮಸ್ಥಂಭಕೆ ಕೈ ಕಟ್ಟಿ
ಕಂಗುಡ್ಡಿಗಳಂ ಹೊರಗಟ್ಟಿ
ನರಕದಕೂಪದ ನೆಲೆಗಟ್ಟಿ

ಇದುವೇ ಪಾಪಿಯ ಯಮಲೋಕ!
ಭಾವಿಕರೆಂಬರು ಭೂಲೋಕ!

ಅಂತ್ಯಜನೆಂಬನ ಅಗ್ನಿಗೆ ಕೊಟ್ಟು
ಕೊಲ್ಲದೆ ಗೋಳಿನ ಗಾಣದೊಳಿಟ್ಟು
ಅನ್ನವನಿಕ್ಕದೆ ಸೆರೆಯೊಳಗಿಟ್ಟು
ಹದ್ದು ನಾಯಿಗಾ ಹೆಣವನೆ ಬಿಟ್ಟು

ಇದುವೇ ಪಾಪಿಯ ಯಮಲೋಕ!
ಭಾವಿಕರೆಂಬರು ಭೂಲೋಕ!



# ಭೂಕಂಪ.

೧

ಪೃಥ್ವಿಯ ಒಡಲೊಳಗಿರುತಿಹುದೇನು ?
ತಳಮಳ ಕಾಯ್ದಿಹ ಲಾವಾರಸವು !
ಭೂಮಿಯು ಗದಗದ ನಡುಗುತಿದೆ !
ಸಾಗರ ಕೊನೆ ಮೊದಲಾಗುತಿದೆ !
ಗಿಡವದು ಬುಡಮೇಲಾಗುತಿದೆ !
ಪಶುಗಳ ಪ್ರಾಣವು ಪೋಗುತಿದೆ !
ಮಾನವಕೋಟಿಯು ಮುಳುಗುತಿದೆ !
ಕಟ್ಟಡ ಕಟ್ಟಡ ಉರುಳುತಿದೆ !
ಪಟ್ಟಣ ಪಟ್ಟಣ ಪೋಗುತಿದೆ !
ಅಂಬರ ನೋಟವ ನೋಡುತಿದೆ !
ಏನಿದು ಭೀಕರ !
ದೃಶ್ಯ ಭಯಂಕರ !!
ಉಳಿಸುವರಾರು ? ಬೆಳಿಸುವರಾರು ?
ದೇವನ ಮನವನು ಗೆಲ್ಲುವರಾರು ?

೨

ಹಿಂದೂದೇಶದೊಳಡಗಿಹುದೇನು ?
ತಾಪದ ಪಾಪದ ಪರಮನ್ಯಾಯ !

ನಾಡಿಗೆ ನಾಡಿದು ನಡುಗುತಿದೆ!
ರಾಜ್ಯದ ಬಿಗಿತನ ಬಿಚ್ಚುತಿದೆ!
ಸ್ವಾತಂತ್ರ್ಯವು ಸಲೆ ಸಾಗುತಿದೆ!
ರಾಟೆಯ ಕೋಟೆಯು ಮುಳುಗುತಿದೆ!
ಬಡವರ ಒಡಲುರಿ ಹೆಚ್ಚುತಿದೆ!
ವಿಧವೆಯ ಶಾಪವು ತಟ್ಟುತಿದೆ!
ಜೀವನ ಕಟ್ಟಡವುರುಳುತಿದೆ!
ಭಾರತ ಕಣ್ಣಲಿ ಕಾಣುತಿದೆ!

ಎಲ್ಲಿಯನ್ಯಾಯ!
ಪರಮನ್ಯಾಯ!!

ಹೇಳುವರಾರು? ಕೇಳುವರಾರು?
ಸಮಾಜಗೋರಿಯ ಕಟ್ಟುವರಾರು?



# ಡೊಂಬರಾಟ !

ಡೊಂಬರಾಟ ! ಡೊಂಬರಾಟ !
ಧನಿಯಮುಂದೆ ಡೊಂಬರಾಟ !

ಕೋಟೆಗೋಡೆ ಮಧ್ಯದಲ್ಲಿ
ಕಾಡುಕಿಚ್ಚು ಬಿಸಿಲಿನಲ್ಲಿ
ಹೊಟ್ಟೆಹಸಿದ ಹೊತ್ತಿನಲ್ಲಿ
ಒಳಗೆ ಒಳಗೆ ಒಡಲಿನಲ್ಲಿ !

ಡೊಂಬರಾಟ ! ಡೊಂಬರಾಟ !
ಧನಿಯಮುಂದೆ ಡೊಂಬರಾಟ !

ಪೊಳ್ಳುಡೊಳ್ಳು ಢೋಲುಬಡೆದ !
ಕೂಗಿ ಕೂಗಿ ಕೇಕೆ ಹೊಡೆದ !
ಕರುಳುತಂತಿ ಮೇಲೆ ನಡೆದ !
ಜೋಲಿಹಿಡಿದು ಜೀಕಹೊಡೆದ !

ಡೊಂಬರಾಟ ! ಡೊಂಬರಾಟ !
ಧನಿಯಮುಂದೆ ಡೊಂಬರಾಟ !

ಹಾರಿ, ಇಳಿದು, ಹತ್ತಿ ದಣಿದ !
ತಿರುವು ಮುರುವು ಲಾಗಹೊಡೆದ !
ಕೈಯ, ಕಾಲು, ಕೀಲು ಮುರಿದ !
ಮುದುಡಿ, ಮುದುಡಿ ಮುದ್ದಿಯಾದ !

ಡೊಂಬರಾಟ! ಡೊಂಬರಾಟ!
ಧನಿಯ ಮುಂದೆ ಡೊಂಬರಾಟ!

ಕೋಲಮೇಲೆ ನಿಂತುಕೊಂಡ!
ಮುಗಿಲಮೇಲೆ ಮಲಗಿಕೊಂಡ!
ಅತ್ತು, ಅತ್ತು, ಅರಚಿಕೊಂಡ!
ಹೊಟ್ಟೆ ಹೊಟ್ಟೆ ಹೊಡೆದುಕೊಂಡ!

ಧನಿಯು ದುಡ್ಡು ಒಗಿಯಲಿಲ್ಲ!
ಡೊಂಬರಾಟ ಮುಗಿಯಲಿಲ್ಲ!!



# ನಂದಾದೀಪ!

೧

ಕೋಣೆಯ ಮೂಲೆಗೆ ಜಗುಲಿಯು ಕಟ್ಟಿ!
ಬೆಳ್ಳಿಯ ಮಂಟಪ ಮಾಡಿಸುತಿಟ್ಟಿ!
ಚಿನ್ನದ ಮುದ್ದಿಯ ಮೂರ್ತಿಯನಿಟ್ಟಿ!
ಎಡಬಲ ನಂದಾದೀಪಗಳಿಟ್ಟಿ!

೨

ಹಗಲಿರುಳೆನ್ನದೆ ಕಾಯುತಲಿರುವಿ!
ತಾಳ ತಂತಿಗಳ ಬಾರಿಸುತಿರುವಿ!
ಸವಿ ಸವಿ ತಿಂಡಿಯ ತೋರಿಸುತಿರುವಿ!
ಪುಣ್ಯವಪಡೆಯಲು ಹವಣಿಸುತಿರುವಿ!

೩

ಆರಿಗೆ ನಿನ್ನಯ ನಂದಾದೀಪ?
ಕೋಣೆಯ ಮೂಲೆಗೆ ನಂದಾದೀಪ?
ಚಿನ್ನದ ಮೂರ್ತಿಗೆ ನಂದಾದೀಪ?
ಸೂರ್ಯನ ತಂದೆಗೆ ನಂದಾದೀಪ?

೪

ಏನಿದುನಿನ್ನಯ ನಂದಾದೀಪ!
ಮುದುಕರ ಮುಂಗೈ ಎಲುವಿನದೀಪ!
ಬಡವರ ಕರುಳಿನ ಬತ್ತಿಯದೀಪ!
ಹೃದಯದ ರಕ್ತದ ತೈಲದದೀಪ!

೫

ನಿನಗೋ ನಿನಗೋ ನಂದಾದೀಪ!
ಒಡವನ ಗುಡಿಸಲಿ ಕತ್ತಲತಾಪ!
ನಿನಗೋ ನಿನಗೋ ಗೆಜ್ಜೆಯಕುಣಿತ!
ಬಡವನ ತಾಯಿಗೆ ಸರ್ಪದಕಡಿತ!

೬

ಪುಣ್ಯವುಬೇಕೇ ಹೇಳುವೆಕೇಳು!
ನಿನ್ನೀ ನಂದಾದೀಪವು ಹಾಳು!
ದೂಡೋ ಬಡವನ ಕತ್ತಲ ಗೋಳು!
ಇಲ್ಲವೆ ದೇವರ ಕಂಗಳ ಕೀಳು!



# ಕೆಂಪುಗಳ ಹಬ್ಬ.

( ಹರೀಂದ್ರನಾಥ ಚಟ್ಟೋಪಾಧ್ಯಾಯರ ಒಂದು ಇಂಗ್ಲೀಷ ಕವಿತೆಯ ಅನುವಾದ )

ಭೂವ್ಯೋಮಾಕಾಶದ ಕೆಂಪುಗಳೆಲ್ಲವು
ಕೂಡುತೆ ಹಬ್ಬವ ಮಾಡಿದವು.
ಬಂದವು ಅಲ್ಲಿಗೆ ಬಗೆ ಬಗೆ ಕೆಂಪು,
ಗುಲಾಬಿ ಪೂಗಳ ಪರಿಮಳ ಕೆಂಪು,
ಮಸಣದ ಜ್ವಾಲೆಯ ಗುಟ್ಟಿನ ಕೆಂಪು,
ಅರುಣ ಕಿರಣಗಳ ಸಂಜೆಯ ಕೆಂಪು,
ಮುದ್ದು ಕೂಸುಗಳ ಕೆನ್ನೆಯಕೆಂಪು,
ಗಿಳಿಗಳ ಚುಂಚಿನ ಅಳಿಯದ ಕೆಂಪು,
ಒಣಗಿದ ಹಣ್ಣಿನ ಒಣ ಒಣ ಕೆಂಪು,
ಹಕ್ಕಿಯ ಕಂಗಳ ಗುಡ್ಡೆಯಕೆಂಪು,
ಪ್ರೇಮದ ಹೃದಯದ ಒಂಟಿಗ ಕೆಂಪು !
ಸಾಗಿತು ಹಬ್ಬವು ಕೂಡಲು ಕೆಂಪು !
ನಿಂತಿತು ಹೊರಬದಿ ಒಂದೇ ಕೆಂಪು !
ಅದುವೇ ಮನುಜನ ಕ್ರೋಧದ ಕೆಂಪು !

# ತಾಳೆಯ ಮರದಡಿ.

೧

ತಾಳೆಯ ಮರದಡಿ
ತಪವನು ಗೈಯುವ
ತರುಣನೆ ಏಳಪ್ಪಾ !
ಕಣ್ಣುಮುಚ್ಚಿ ನೀ
ಕಾಲವ ಕಳೆದರೆ
ಕಾಣುವಿಯೇನಪ್ಪಾ !

೨

ತಾಳೆಯ ಮರವಿದು
ಬಾಳಲಿ ಬಹುದಿನ
ಕೇಳುವರಾರಪ್ಪಾ !
ಅರಳು ಮಲ್ಲಿಗೆಯು
ಅರೆಚಣವಿರುವದು
ಪರಿಮಳವೆಷ್ಟಪ್ಪಾ !

೩

ಕಾಯಕವರಿಯದೆ
ಕಾಯವ ಬೆಳಸಿದಿ
ಹೇಯವು ತಿಳಿಯಪ್ಪಾ !
ಅರೆಚಣ ಬಾಳಿರು
ಪರರನು ಪ್ರೀತಿಸು
ಹರನೊಲಿಯುವನಪ್ಪಾ !

# ಚಿತ್ರದ ಅಂಗಡಿ.

ಗದುಗಿನ ನಾಡಹಬ್ಬದಲ್ಲಿ ಶ್ರೀ 'ಮಧುರ ಚೆನ್ನ' ರಿಂದ ಪರೀಕ್ಷಿಸಲ್ಪಟ್ಟು
ರಜತಪದಕವನ್ನು ಪಡೆದುದು.

ಅಮ್ಮಾ, ಚಿತ್ರದ ಅಂಗಡಿ ನೋಡೆ!
ಸುಂದರ ಸೊಬಗಿನ ಅಂಗಡಿ ನೋಡೆ!
ಬಗೆ ಬಗೆ ಬಣ್ಣದ ಪಟಗಳ ನೋಡೆ!
ಭಾರತದೇಶದ ಚಿತ್ರವನೋಡೆ! ||೧||

ಅಮ್ಮಾ, ಇಲ್ಲಿದೆ ಹೆಚ್ಚಿನ ಚಿತ್ರ!
ಸಕಲರ ಮನವನು ಸೆಳೆಯುವ ಚಿತ್ರ!
ಇದುವೇ ನಾ ಹಟ ಮಾಡಿದ ಚಿತ್ರ!
ಕನ್ನಡ ಕುವರರ ಹೆಮ್ಮೆಯ ಚಿತ್ರ! ||೨||

ಸುಂದರ ಬನಗಳ ಚಿತ್ರಿಪ ಚಿತ್ರ!
ಗುಡ್ಡ ಬೆಟ್ಟಗಳು ತುಂಬಿಹ ಚಿತ್ರ!
ಗೋದಾವರಿ ಹೊಳೆ ಹರಿದಿಹ ಚಿತ್ರ!
ಕಾವೇರಿಯು ತಾ ಕಾಣುವ ಚಿತ್ರ! ||೩||

ಅಮ್ಮಾ, ಇಲ್ಲಿಹ ಗುಡಿಗಳ ನೋಡು!
ಜಕ್ಕಣ ಶಿಲ್ಪಿಯ ಜಾಣ್ಮೆಯ ನೋಡು!
ವಿಜಯನಗರದಾ ವೈಭವ ನೋಡು!
ಹುಕ್ಕ ಬುಕ್ಕ ಮಾಧವರನು ನೋಡು! ||೪||

ಅಮ್ಮಾ, ಕುಮಾರವ್ಯಾಸನ ಚಿತ್ರ !
ಕಲ್ಯಾಣದ ಆ ಬಸವನ ಚಿತ್ರ !
ಚೆನ್ನಮ್ಮನ ಕಿತ್ತೂರಿನ ಚಿತ್ರ !
ಬೆಳವಡಿ ರಾಣಿಯ ಶೌರ್ಯದ ಚಿತ್ರ ! ||೫||

ಅಮ್ಮಾ, ಇದದೋ ಹಳ್ಳಿಯ ಚಿತ್ರ !
ನೇಗಿಲ ಹೊಡೆಯುವ ಯೋಗಿಯ ಚಿತ್ರ !
ರಾಟಿಯ ತಿರುಗಿಪ ಭಗಿನಿಯ ಚಿತ್ರ !
ಖಾದಿಯ ಕೊಳ್ಳುವ ಜನಗಳ ಚಿತ್ರ ! ||೬||

ಅಮಮಾ ! ಭೀಕರ ದೃಶ್ಯವಿದಲ್ಲೆ ?
ಬಡವನ ಗೋಳಿನ ಚಿತ್ರವಿದಲ್ಲೆ ?
ಹೊಲೆಯರೆಂದು ಸಲೆ ಹಳಿಯುವರಲ್ಲೆ ?
ದಾಸ್ಯದ ದಾಹದಿ ಬಳಲುವರಲ್ಲೆ ? ||೭||

ಅಮ್ಮಾ, ಇಲ್ಲಿಹ ನೋಟವಿದೇನು ?
ಕನ್ನಡದಮ್ಮನು ಅಳುತಿಹಳೇನು ?
ಕರುನಾಡಿನ ಜನ ಮಲಗಿಹುದೇನು ?
ಪರನಾಡಿನ ಜನ ಬರುತಿಹುದೇನು ? ||೮||

ಅಮ್ಮಾ, ಬೇಕಿದು ಚಿತ್ರವು ನೋಡು !
ಅಯ್ಯೋ ! ಮರಾಠ ಬಂದನು ನೋಡು !
ತೆಲುಗನು ಬಂದನು ಕೊಳ್ಳನು ನೋಡು !
ಅಪ್ಪನ ಹುಡುಕುವ ಬೇಗನೆ ಓಡು ||೯||

ಅಪ್ಪಾ ! ಅಪ್ಪಾ !! ಎಲ್ಲಿಹೆ ಬಾರೋ !
ಪ್ರೀತಿಯ ಚಿತ್ರವ ಕೊಳ್ಳರು ಬಾರೋ !!
ಕರ್ನಾಟಕವಿದು ಪೋಪುದು ಬಾರೋ !!!
ಕನ್ನಡಿಗನೆ ನೀ ಜೇಗನೆ ಬಾರೋ !!!! ॥ ೧೦ ॥



# ಸಗ್ಗದೊಡೆಯನ ಬಿಂಕ.

ಜಗವನು ಬೆಳಗುವ ರವಿಯಿಹನೆಂದು,
ತಣ್ಣದಿರನು ಶಿರದೊಳಗಿಹನೆಂದು,
ಅಪಾರ ಸಂಪದವಲ್ಲಿಹುದೆಂದು,
ಅಷ್ಟೈಶ್ವರ್ಯವು ತನಗಿಹುದೆಂದು,

ಸಗ್ಗದೊಡೆಯ ತಾ ಪೇಳುವನು!
ಬಲು ಬಲು ಬಿಂಕವ ತಾಳಿಹನು!!

ಮೀರಿದ ಶೂರರು ಅಲ್ಲಿಹರೆಂದು,
ಕುಕ್ಕುವ ಕವಿವರರಿರುತಿಹರೆಂದು,
ಮುನಿವರರೆಲ್ಲರು ತನ್ನವರೆಂದು,
ಕಲೆಗಳ ಕೋವಿದರಲ್ಲಿಹರೆಂದು,

ಸಗ್ಗದೊಡೆಯ ತಾ ಪೇಳುವನು!
ಬಲು ಬಲು ಬಿಂಕವ ತಾಳಿಹನು!!

ಸಗ್ಗದೊಡೆಯನೇ ತಿಳಿಯಿತು ತಿಳಿಯಿತು!
ನಿನ್ನೀ ಬಿಂಕದ ಮರ್ಮವು ಹೊಳೆಯಿತು!
ರವಿ ಕರುನಾಡನು ಕದ್ದಿಹ ಚೋರಾ!
ಕನ್ನಡ ಚಂದ್ರಮನೆತ್ತಿಹ ಚೋರಾ!

ವಿಜಯನಗರವನೆ ವೈದಿಹ ಚೋರಾ!
ನನ್ನಾಯಸಿರಿ ಸಲೆ ಸೇವಿಪ ಚೋರಾ!

ಚೋರನೆ ಸಗ್ಗದ ಒಡೆಯನೆ ತಿಳಿಯಿತು!
ನಿನ್ನೀ ಬಿಂಕದ ಮರ್ಮವು ಹೊಳೆಯಿತು!

ವೀರಪುಂಗ ಪುಲಿಕೇಶಿಯ ಚೋರಾ!
ಪಂಪ, ರನ್ನ, ಶ್ರೀ ಹೊನ್ನರ ಚೋರಾ!
ವಿದ್ಯಾರಣ್ಯರನೊಯ್ದಿಹ ಚೋರಾ!
ಜಕ್ಕಣಶಿಲ್ಪಿಯ ಜಗ್ಗಿದ ಚೋರಾ!

ಬಿಡು ಬಿಡು ನಿನ್ನೀ ಬಿಂಕವನು!
ಹಿಡಿ ಹಿಡಿ ಸತ್ಯದ ಮಾರ್ಗವನು!!



# ಶಾಪ !

ಕಾಳರಾಣಿ ಕೊಲೆಪಾತಕ ಒಂದ !
ಮೂಳನಾಗಿ ಮೊಗದೋರಲು ಬಂದ !! ೧
ಮುಗಿಲರಮನೆ ಮುಂಭಾಗದಿ ನಿಂದ !
ಜಗದ ಜಾತಿಗಳ ನೆಬ್ಬಿಸಿರೆಂದ !! ೨
ಮನುಜನೊಬ್ಬ ಮನೆಯಿಂದಲಿ ಬಂದ !
ಹನಿನೀರಿಗೆ ತಾ ಕೆರೆಗೈತಂದ !! ೩
‘ ಕೊನೆಯಮನುಜ ನಾ ಕಾಣಿರಿ ’ ಯೆಂದ !
‘ ಕನಿಕರ ಕಣ್ಣೀರೆರೆಯಿರಿ ’ ಯೆಂದ !! ೪
ಸೂರ್ಯನು ಸಹಿಸದೆ ಸಾಗುತೆ ಬಂದ !
ಕ್ರೌರ್ಯಾಂಬುಗಳಂ ಕೆಡುಃಹಲು ಬಂದ !! ೫
ಸಾಲದೆ, ಸಾಗಿಯೆ ಸಾಗಿಯೆ ಬಂದ !
ಕೋಲು ಕಿರಣಗಳ ಕೆಡಹುತೆ ಬಂದ !! ೬
ಪಡುವಣಾಂಗನೆಯ ಪತಿಯಾಗಲು ಬಂದ !
ಕಡಲಿನೊಡೆತನವ ತಾ ಕೋರಲು ಸಂದ !! ೭
ಮಱುಗಿ ಮರಳಿ ಆ ಮನುಜನು ಬಂದ !
ಬರಿಯ ಕೊಡವ ತಾ ಮನೆಯೊಳು ತಂದ !! ೮
ಮಕ್ಕಳ ಮುಖಗಳ ನೋಡುತೆ ನೊಂದ !
ಉಕ್ಕುವ ದುಃಖದಿ ಕಂಬನಿ ತಂದ !! ೯
‘ ಸಲಹುವ ಸೃಷ್ಟಿಯ ನ್ಯಾಯವಿದೆಂ ’ ದ !
‘ ಹೊಲೆಯರೆಲ್ಲ ಹಾಳಾಗಲಿ ’ ಯೆಂಹ !! ೧೦

# ಆಕಳು ಅಂಬಾ! ಅನ್ನುತಿದೆ!

೧

ಆಕಳು ಅಂಬಾ ಅನ್ನುತಿದೆ!
ಕರುಗಳ ಮುಖಗಳ ನೋಡುತಿದೆ!
ಕಂಬನಿಗಳ ಸಲೆ ಸುರಿಸುತಿದೆ!
ಹುಲ್ಲನು ಹಾಕಿರಿ ಅನ್ನುತಿದೆ!

೨

ಆಕಳು ಅಂಬಾ! ಅನ್ನುತಿದೆ!
ಆಕಾಶದಕಡೆ ನೋಡುತಿದೆ!
ಹಿಂಡಿಸಿಕೊಳ್ಳುತ ಹಲುಬುತಿದೆ!
ಕಣ್ಣೆಯನುಚ್ಚಲು ಕೋರುತಿದೆ!

೩

ಆಕಳು ಅಂಬಾ! ಅನ್ನುತಿದೆ!
ದಾಸ್ಯದ ದಾಹದಿ ಬಳಲುತಿದೆ!
ಸ್ವಾತಂತ್ರ್ಯವಗಡ ಬಯಸುತಿದೆ!
ಭಾರತ ಮಕ್ಕಳ ನೋಡುತಿದೆ!

# ತೇರು !

೧

ಕಾಲನ ಕಲ್ಲಿನ ಚಕ್ರಗಳು !
ತೊಡೆಗಳ ಎಲುವಿನ ಅಚ್ಚುಗಳು !
ಪೊಳ್ಳಿನ ಹೃದಯದ ಹಂದರವು !
ಗಂಡಿನ ಹೆಣ್ಣಿನ ಹುಡುಗರ ಕಳಸ !

೨

ಕಟ್ಟ್ಯೋ ಮಂಗಲ ಸೂತ್ರಗಳ !
ರುಂಡ ದಿಂಡಗಳ ಮಾಲೆಗಳ !
ಬೆಳಗೋ ಕಂಗಳ ಕತ್ತಲೆದೀಪ !
ಹಾಕೋ ನಿಡಿದುಸಿರಿನಧೂಪ !

೩

ಬಿಗಿಯೋ ಕೂದಲ ಹಗ್ಗವನು !
ಹೊಡೆಯೋ ಹುರುಪಿಲಿ ಕೇಕಿಯನು !
ಊದೋ ಕಹಳೆ ತುತೂರಿಯನು !
ದೂಡೋ ಹಿಂದಕೆ ವಿಧವೆಯನು !

೪

ಉರುಳಿತು ಅದದೋ, ಅಪ್ಪನ ತೇರು !
ಕಾಣುವವಯ್ಯೋ, ಕಣ್ಣಾಲಿ ನೀರು !
ಸಾಗಿತು, ಸಾಗಿತು ಸಿದಿಗೆಯ ತೇರು !
ಕಾಲನ ಕಣ್ಣಾಲಿ ಮಣ್ಣಾನು ತೂರು !

# ಬಾರಕೋಲು.

ಹೊಲೆಯ ! ಹೊಡೆಯಬೇಡೆಲೋ
ಹಳ್ಳಿ ಎತ್ತನು !
ಕ್ರೂರಿ ! ಕನಿಕರಿಲ್ಲವೋ
ಕೊಲ್ಲೊ ಕುತ್ತನು ! ೧

ದುಡಿದು ದೇಹವೆಲ್ಲವೂ
ಕೊರಗಿ ಕುಂದಿದೆ !
ಸುಟ್ಟ ಸುಣ್ಣದಂತೆಯೇ
ಸತ್ವಗುಂದಿದೆ ! ೨

ಎಲವೊ ನಿನ್ನಗಾಗಿಯೇ
ರಕುತ ಸುಟ್ಟಿದೆ !
ತಿಂದ ನಿನ್ನ ಹೊಟ್ಟೆಯೇ
ಉಬ್ಬಿ ಬಿಟ್ಟಿದೆ ! ೩

ಕೊಟ್ಟ ಎತ್ತು ಕೊಳ್ಳಲಿಲ್ಲ
ಅಯ್ಯೊ ! ಬಾರಕೋಲು !
ಹಸಿದ ಹೊಟ್ಟೆ ತುಂಬಲಿಲ್ಲ
ಮೇಲೆ ಬಾರಕೋಲು ! ೪

ಕೈಯಲಿದ್ದ ಬಾರಕೋಲು
ಕಳಚಿ ಬೀಳಲಿ !
ಸಾಲವಿದ್ದ ಸಾಲಗಾರ
ಸತ್ತು ಹೋಗಲಿ ! ೫

# ಬೀಳ್ದ ಕುಸುಮ.

ಆವದೇವನ ಬನವೋ! ದೇವದೇವನ
ಬನವೋ! ದೇವನಾಡಿದ ಬನವೋ! ಮತ್ತೆ
ದೇವಾನುದೇವತೆಗಳೆಲ್ಲ ಕೂಡಿದ
ಬನವೋ! ಇದು ಇಂದ್ರವನ! ಸಗ್ಗವನ!
ಆವುದಾದರು ಇರಲಿ; ನಾನಿರ್ಪ
ಬನವಿದೇಂ ದಿವ್ಯ ಬನವೋ!
ಪೂರ್ವಜನ್ಮದ ಫಲವೋ! ಪುಣ್ಯ
ಪೆಚ್ಚಿದ ಫಲವೋ! ದೇವನೊಲುಮೆಯ
ಫಲವೋ! ಏನಿರ್ದೊಡೇನಿಂದು
ಸುಪ್ರಭಾತದ ಸಮಯ! ಏವೇಳ್ಪೆ
ಬನಸಿರಿಯನೆಡೆವಿಡದಲೀಕ್ಷಿಸುವ
ಕಂಗಳಿವು ನಿಜ ಧನ್ಯ! ಧನ್ಯ!!

ಬನದಸುತ್ತಲು ಮತ್ತೆ ಬೆಟ್ಟಗಳು!
ಬೆಟ್ಟದೊಳು ಅಲ್ನೋಡು ದಿವ್ಯಬೆಟ್ಟ!
ಹಿಂಜಿದರಳೆಯಬೆಟ್ಟ! ಹಿಮದಬೆಟ್ಟ!
ಮುಗಿಲರಸಿಯನ್ನೊಮ್ಮೆ ಮುದ್ದಿಡುವಬೆಟ್ಟ!
ಆರವರು? ಬೆಟ್ಟವಂ ಅಡರಿಹರು?
ಅಡರಿ ಇಳಿಯುತಲಿಹರು ಇತ್ತಕಡೆ
ಮೇಲುನಡಿಗೆಯಿಂ ಬರುತಿಹರು. ಓ, ನನ್ನ
ಗಂಗೆ, ಯಮುನೆಯರು! ಸಂಚರಿಸಿ ಅಲ್ಲಲ್ಲಿ

ಏವೇಳ್ಯರೇನೊ, ಎಂತೊ, ಮನೆಗಂತು
ಬರಲಿ. ಅಯ್ಯೊ , ಏಂ ಪ್ರಮಾದವನರಿಯೆ
ಸಾಗರದಿ ಧುಮುಕಿದರು ಎಂದೇಳ್ವರೋ !
ಇದುನೋಡು ಇತ್ತಲೂ ಸಮುದ್ರಶ್ಯ !
ಭೀಮೆ, ಕೃಷ್ಣೆ, ಕಾವೇರಿಯರು ಅತ್ತಿಂದ
ಬಂದೊಡನೆ ಸಾಗರದಿ ಧುಮುಕಿದರು ಸುಳಿವಿಲ್ಲ.
ವಿಧವೆಯರೆ ಅವರೆಲ್ಲರೂ ? ಅಲ್ಲಲ್ಲ !
ಅವರ ನಲ್ಲರ ನೆನಹು ನನಗಿರ್ಪುದೈ !
ಏಂ ಕಾರಣವೊ ನಾನರಿಯೆನಲ್ಲಾ !
ಅಯ್ಯೊ, ನಾನೆಂಥ ಜಾಣೆ ? ಎನಗಿರ್ಪ
ಉದಯದಾನಂದದಲಿ ಕಾಳತಾಪವ ಮತ್ತೆ
ಬೆರೆಸಲೆತ್ನಿಸುತಿರ್ಪೆ, ಹುಚ್ಚು ! ಹುಚ್ಚು !
ಸುಪ್ರಭಾತದಲೇಳ್ದು, ಸೃಷ್ಟಿಸೊಬಗಂ ಕಾಣ್ದು
ಅವರೆಲ್ಲರೂ ಜಲಕ್ರೀಡೆಯಾಡುತಿರ್ಪರ್.

ಇದು ನೋಡು, ಇಲ್ಲಿರ್ಪ ಸೋಜಿಗದ ಕಾರಂಜಿ !
ಪೂರ್ವಜರ ಕೌಶಲ್ಯ ಹೊರಹೊಮ್ಮುತಿದೆ ! ಮತ್ತೆ
ಪುಟಿಯುತಿದೆ ! ಎಂಪ್ರೋಲ್ವರಾರೆಂದೇನೊ
ಅಂದಂದು, ಜಿಗಿಜಿಗಿದು, ಪುಟಿಯುತಿದೆ !
ಇಂದೇಕೊ ಕಾರಂಜಿ ಜಲದಿ ತುಂಬಿಲ್ಲವೇನೋ !
ಜಲವಿರ್ದರೂ ಪುಟವ ಶಕ್ತಿಯಿಲ್ಲೇನೋ !
ಶಕುತಿಯಿರುತಿರ್ದರೂ ಮಾರ್ಗವಿಲ್ಲೇನೋ !

ಇರಲಿ, ಇದುನೋಡು ಕುಸುಮಗಳ ಉದ್ಯಾನ !
ಅಲ್ಲಿ ಸೇವಂತಿಗೆಯು ! ಇಲ್ಲಿ ಸಂಪಿಗೆಯು !
ಎಲ್ಲೆಲ್ಲು ಮಲ್ಲಿಗೆ ಪಾರಿಜಾತಗಳು !
ಎಲ್ಲವೂ ಎಲ್ಲರಿಗೆ ಸೌಗಂಧ ಪೂಸುತಿವೆ !
ಮಂದಮಾರುತಗಂತು ಕೇಳ್ವರಾರೊಬ್ಬರಿಲ್ಲ !
ಕುಸುಮ ಬೇಡದ ಕುವರಿಯಿರುತಿರ್ಪಳೇ ?
ಮತ್ತೆ ದೇವನಿರ್ಪನೆ ಪೇಳಿ ಪೇಳಿ !
ಕೆಲರು ತಮ್ಮಯ ನಲುಮೆಗೋಸುಗ ಕುಸುಮ-
ಗಳನಾಯುತಿಹರಲ್ಲಿ ! ಕೆಲರು ದೇವನಪೂಜೆ-
ಗೆಂದಾಯುತಿಹರದದೊ ! ಕೆಲರು ತಮ್ಮಯ
ನಲ್ಲೆಯರಿಗಾಗಿ ! ಏಂ ಕುಸುಮಗಳೋ ! ಎಷ್ಟು
ಜನಕೀವವೋ ! ಮೊದಲೆಷ್ಟು ಅರಳಿದವೋ !
ಮುಂದೆಷ್ಟು ಅರಳುವವೋ ! ಇಂದೆಷ್ಟುನಾನರಿಯೆ !

ಏನಿದೀ ಅನ್ಯಾಯ ! ಘೋರತರ ಅನ್ಯಾಯ !!
ಈ ಬೀಳ್ದ ಕುಸುಮವಂ ಆಯ್ವರಾರೊಬ್ಬರಿಲ್ಲ.
ನನ್ನ ನಲ್ಲನೆ ಅಂದು ಎಂದೋ ಒಮ್ಮೆ
ಕೆಡಹಿದಂತೆಯೊ ಏನೊ ಭಾಸವಾಗುತಿದೆ;
ಅಥವಾ ಆವರಪ್ಪ ತಾತ ಮುತ್ತಾತ
ಕೆಡಹಿರಬಹುದು. ಆದೊಡೇನದನೊಮ್ಮೆ
ಕಣ್ದೆರೆದು ನೋಡದಿರ್ಪುದೆ ನಲ್ಲ?
ಅದದೊ ನನ್ನಯ ನಲ್ಲ ನಿದ್ರೆಯಿಂದೆಚ್ಚತ್ತು
ಈಗೀಗ ಕಣ್ಣೊರಿಸಿಕೊಳ್ಳುತ್ತ ಮೆಲ್ಲನೆ
ಆಗಮಿಸುತಿರುವಂತೆ ತೋರುತಿದೆ !

ಕಲ್ಲುದೇವನ ಕಂಠ ಪೂಮಾಲೆಯಿಂ
ಶೋಭಿಸುತಿರ್ದೊಡೇಂ ಬೀಳ್ದ ಕುಸುಮಕೆ
ಆ ಮಾಲೆಯೊಳ್ ತಾಣವಿರಲಿಲ್ಲ. ಮತ್ತೊಮ್ಮೆ
ಕೆರೆಗೆ ನಾನೈತಂದೆ. ಕುವರಿಯರ ಮುಡಿಗಳಲಿ
ಮಲ್ಲಿಗೆಗಳೆಷ್ಟಿರ್ದೊಡೇಂ ಬೀಳ್ದ ಕುಸುಮ
ಆರೊಬ್ಬರಲ್ಲಿಯು ಕಾಣೆ! ಎಲ್ಲಿಯೂ ಕಾಣೆ ಕಾಣೆ!

ನಾನಾರೆ ಮುಡಿಯಲಾ? ನನ್ನ ನಲ್ಲನ ಭಯವು!
ಕೇಳದಲೆ ಮುಡಿದಳೆಂದೆಲ್ಲಿ ಮುನಿಯುವನೋ!
ಬಿಟ್ಟುಬಿಡಲಾ? ಮತ್ತೆ ಮರುಕ ಬಪ್ಪುದು!
ಬರಲಿ ಎನ್ನೊಡೆಯ ಕೇಳಿಯೆ ಬಿಡುವೆ!
'ಬತ್ತಿಹುದು ಬಾಡಿಹುದು ಬಿಸುಡೆ' ನ್ನುವನು!
'ಅದಕೆಲ್ಲ ಕಾರಣರು ನೀವೆಂ' ದು ನಾನುಡಿವೆ.

ಸ್ವಾಗತವು ಸ್ವಾಗತವು ಓ, ನನ್ನನಲ್ಲ!
ಬೀಳ್ದ ಕುಸುಮವನಿಲ್ಲಿ ಬಿಟ್ಟು ಬಿಡುವುದೇ?
ಆವಕರ್ಮದ ಫಲವೋ! ಏಂ ನಿಮ್ಮ ಛಲವೋ!
ಬೀಳ್ದ ಕುಸುಮವೆ ಇರಲಿ; ಏಳ್ದುದಿರಲಿ;
ಏನಾದೊಡೇಂ ಕುಸುಮ! ಕುಸುಮ!
ನನ್ನೊಡೆಯ, ನನ್ನೊಡೆಯ, ಓ ನನ್ನ ಒಡೆಯ
ಮೆಯ್ಯೊಳಿಹ ಬಿಸಿರಕ್ತ ತಣ್ಣಗಾಗುವ ಮುನ್ನ,

ಶಕುತಿಯದು ಕುಗ್ಗಿ ಕುಂದದ ಮುನ್ನ,
ಕಪ್ಪಿನೀ ಕೇಶಗಳು ಬಿಳಿಯವಾಗುವ ಮುನ್ನ
ನನ್ನೊಡೆಯ, ನನ್ನೊಡೆಯ, ಓ ನನ್ನ ಒಡೆಯ
**ಬೀಳ್ದ ಕುಸುಮವನೆನ್ನ ಮುಡಿಯೊಳಿಡು!**
**ಬಿಟ್ಟ ಜೊಲೆಯುರನೊಮ್ಮೆ ಮುಟ್ಟಿಬಿಡು!**



# ಸೀತಾದೇವಿಯ ಅಗ್ನಿಪ್ರವೇಶ.

( ಶ್ರೀಮಾನ್ ಗುಡಿಪಾಟಿ ವೆಂಕಟಾಚಲಮ್‌ರವರ ಲೇಖನವೊಂದನ್ನು ಬೆಂಗಳೂರಿನ ಕನ್ನಡಿಗರೊಬ್ಬರು ಅನುವಾದಿಸಿದುದರ ಆಧಾರದಿಂದ ಬರೆದುದು. )

ಸೀತಾ:— ಬಾರಿಲ್ಲಿ ಶ್ರೀರಾಮ ಕಲ್ಯಾಣಮೂರ್ತಿ,
ಬಹುದಿನದಿ ಬಳಲಿಹೆನು; ನೊಂದಿಹಿರಿ, ಬೆಂದಿಹಿರಿ
ಅಗಲಿಕೆಯ ಅನುದಿನದ ಅಗ್ನಿಗಳ ಜ್ವಾಲೆಯಲಿ.
ನೀನಿಲ್ಲದಿರೆ ನನಗೆ ಜಗವೆಲ್ಲ ಬರಿದಹುದು.
ನನಗಾಗಿ ಹಳಹಳಿಸಿ ಕಳವಳಿಸಿ ಬಿಸುಸುಯ್ದು
ಹನುಮನನು ದಾಂಟಿಸಿದಿ ಅಂಬುಧಿಯನೀನಂದು
ಈರೈದುಶಿರದವನ ರುಂಡಗಳ ಚೆಂಡಾಡಿ
ನೀನಿಂದು ಬಂದಿರುವೆ; ಬಹುವಾಗಿಬೆಂದಿರುವೆ.
ರಾವಣನ ಹರತಾದ ಬಿರುಸಾದ ಬಾಣಗಳ
ಮಳೆಯಲ್ಲಿ ತೊಯ್ದಿಹೆವು; ನಾವಿಂದು ಕೂಡಿಹೆವು.
ತಡವೇಕೆ ಬಾಯಿನ್ನು ಕೈಚಾಚಿ ಬಿಗಿದಪ್ಪು;
ತಣ್ಪುಂಟು ಮಾಡುವೆನು ಬಲವಾಗಿ ಮುದ್ದಿಟ್ಟು.
ಪ್ರೇಮಾಬ್ಧಿಯಲಿ ಬಿದ್ದು ತೇಲಾಡು; ಲೋಲಾಡು.

ರಾಮ:— ಹಳಹಳಿಸಿ
ಕಳವಳಿಸಿ ತೊಳಲಿರಲಿ ಬಳಲಿರಲಿ
ನಾನೊಲ್ಲೆ ಪ್ರೇಮವನು ತೊರೆದಿಹೆನು.
ವಿಧಿವಶದಿ ನೀನಂದು ಶತೃವಿನಕರದಿಂದ

ಅಪಹೃತಿಸಿ ರಾವಣನ ಏಕಾಂತ, ಸಟೆಯಲ್ಲ
ದಿಟವಹುದು ಹರ್ಮ್ಯಗಳವಾಸ–

ಸೀತಾ:— ಅಲ್ಲಲ್ಲ ವನವಾಸ.

ರಾಮ:— ಇರಲಿರಲಿ ನೀನೀಗ ಅಸ್ಪೃಶ್ಯಳ್ !

ಸೀತಾ:— ನಾನರಿಯೆ.

ರಾಮ:— ಮೋಹಿಸಿದ ದಶಕಂಠ ಸೀತೆಯನು

ಸೀತಾ:— ನಾ ಪಾಪಿಯೇ?

ರಾಮ— ಕದ್ದೊಯ್ದ ನವನಂದು.

ಸೀತಾ:— ತಪ್ಪಾರದು ?

ರಾಮ:— ತಪ್ಪಿಲ್ಲದಿರೆ ನಿನ್ನ ದುರದೃಷ್ಟ.

ಸೀತಾ:— ರಾಮಚಂದ್ರ,
ಪಣದಲ್ಲಿ ನೀಗೆಲಿದು, ಸೀತೆಯನು ಕೈಹಿಡಿದು,
ಭಾಷೆಯಂ ನೀಕೊಟ್ಟು, ಸುಖದುಃಖಗೊಳಪಟ್ಟು,
ಜಾನಕಿಯ ದಶಕಂಠನೆಳೆದೊಯ್ದು ಮೋಹಿಸಲು,
ಶ್ರೀರಾಮನಲ್ಲದಿರೆ ರಕ್ಷಿಸರು ಬೇರುಂಟೆ?

( ರಾಮನು ಮೌನ )

ಸೀತಾ:— ಜಾನಕಿಯ ತ್ಯಜಿಸಲಿಕ್ಕೆ, ಜ್ವಾಲೆಯಲಿ ದೂಡಲ್ಕೆ
ಘೋರಯುದ್ಧವನಂದು ಹೂಡಿದುದೆ ಶ್ರೀರಾಮ ?

ರಾಮ:— ಅಲ್ಲಲ್ಲ, ಕೇಳಿಲ್ಲಿ ವಡವಾಗ್ನಿ ನೊಂದಿಸಲು;
ಶತ್ರುವನು ದಂಡಿಸಲು; ಕ್ಷಿತಿಧರ್ಮ ಪಾಲಿಸಲು.

ಸೀತಾ:— ಅಹುದಹುದು ನಾಬಲ್ಲೆ ಶ್ರೀರಾಮಧರ್ಮ.
ಮಡದಿಯಂ ಬಿಡಲಿಹುದು ಶ್ರೀರಾಮಧರ್ಮ.
ಮಹಿಳೆಯರ ತುಳಿಯುವದು ತಿಳಿದಂತೆ ಹಳಿ-
ಯುವದು ನಿಜಧರ್ಮ, ಶ್ರೀರಾಮಧರ್ಮ!
ಸೀತೆಯಂ ವರಿಸಿದುದು ಸಂಸಾರಧರ್ಮ!
ಕಾಡುಗಳನಲೆಸಿದುದು ಪ್ರಾತಿಜ್ಞ್ಯಧರ್ಮ!
ಸಂಗ್ರಾಮ ಪೂಡಿದುದು ಕ್ಷಾತ್ರಧರ್ಮ!
ಸತಿಯಳನು ತ್ಯಜಿಸುವದು ರಾಜಧರ್ಮ?
ಇರಲಿರಲಿ ಶ್ರೀರಾಮ ನನಗಿರಲಿ ನನ್ನಧರ್ಮ.
ನನಗಾಗಿ, ಭೂಸುತೆಯು ಅನುರಾಗಕಾಗಿ
ಪ್ರೇಮಬಂಧವ ಮಾಳ್ಪ ರಾಜ್ಯವನು ಬಿಡೆಯಾ?

ರಾಮ:— ಪ್ರಜಾಜ್ಞೆಯಿಲ್ಲದಲಾಗದಾಗದು!

ಸೀತಾ:— ಪಟ್ಟದಲಿ ಕುಳಿತಿಲ್ಲ ಪ್ರಜೆಗಳಂ ಕೇಳ್ದಪುದೆ?

ರಾಮ:— ಅಹುದಹುದು ಜನವಾಣಿ, ದೇವವಾಣಿ!

ಸೀತಾ:— ಜನವಾಣಿ ದೇವವಾಣಿಯೆ ರಾಮ?
ಅಂದು ದಶರಥಪ್ರಭುವು ಕಾಡು ದೂಡಲು ನಿನ್ನ,
ಪ್ರಜರೆಲ್ಲ ಕೂಡುತಲಿ, ಕಂಬನಿಯ ಸುರಿಸುತಲಿ,
ಬೇಡೆಂದು, ಬೇಡೆಂದು ಧ್ವನಿಗೈದು ಅಳುತಿರಲು
ಎಲ್ಲಿರ್ದುದಾ ನಿನ್ನ ಪ್ರಜಾವಾತ್ಸಲ್ಯ?
"ಪಿತನವಾಕ್ಯವೆ ನನಗೆ ವೇದನುಡಿ" ಯೆಂದು
ಪ್ರಜೆಗಳನು ಲೆಕ್ಕಿಸದೆ ಕಾನನವ ಸೇರಿದಿಯೋ!
ನನ್ನೀಗ ಬಿಡಲಿರುವೆ ಜನಪ್ರೇಮಕಾಗಿ?

ಅಕಟಕಟ ಮರೆತಿರ್ದೆ ಜಾನಕಿಯು ಸ್ತ್ರೀಯೆಂದು !
ಪುರುಷರನ್ಯಾಯವನು ಕೋಪವನು, ತಾಪವನು,
ಸೈರಿಸುತ, ಸೈರಿಸುತ, ಸೈರಿಸುತ ನಾರಿಯರು,
ತುಟಿಯೆರಡು ಮಾಡದಲೆ, ವಚನವಂ ಮೀರದಲೆ
ಪಾದಪೂಜೆಯಗೈದು, ಶ್ವಾಸ ಶೂಕರರಂತೆ
ಜೀವನವ ನಡಿಸಲ್ ಸುಗುಣಿಯರು ನಾರಿಯರು.
ಪುರುಷನಂತಿರದಿರಲ್ ಕುಲಟೆಯರು ನಾರಿಯರು.
ಅಡಗಿಹುದೆ, ಮಲಗಿಹುದೆ ಭಾರತದಭೂಮಿ ?
ಸ್ತ್ರೀಯರನು ಪೂಜಿಸುವ ಪುಣ್ಯಭೂಮಿ ?
ಇರಲಿರಲಿ ಪ್ರಾಣೇಶ ಅನುರಾಗ ತೋರೋ !

ರಾಮ:— ಬಲುಮೊಯೇತಕೆ ಸೀತಾ ?

ಸೀತಾ:— ಸ್ವಾರ್ಥಪರರಾಮ, ಬಲವಾಗಿ ನೀನಿರಲಿ,
ರಾಜ್ಯವದು ಬಲತಿರಲಿ, ಸಂಪತ್ತು ಬೆಳೆದಿರಲಿ,
ಜಾನಕಿಯು ದಿಕ್ಕೆಟ್ಟು, ಕಂಗೆಟ್ಟು ನಾಯಾಗಿ
ಅಡವಡವಿ ಅಲೆದಲೆದು ಅಳುತಿರಲಿ ನಿನಗೇನು ?
ಎಲ್ಲೆಲ್ಲು ವಿಧಿಯುಂಟು, ಹಕ್ಕುಂಟು ನಿನಗೆ.
ನಾರಿಗೆಲ್ಲಿದೆ ಪ್ರಾಣ ? ಅಬಲೆಗೆಲ್ಲಿದೆ ಹೃದಯ ?
ಸ್ತ್ರೀಯೆಂದರದುವೊಂದು ಮಕ್ಕಳನು ಹೆರುಯಂತ್ರ.
ಮಲಿನವಾಗುತಲೊಂದು ಮತ್ತೊಂದು ತರಲಿಹರು.
ಮತ್ತೊಂದು ಬೇಡಾಗೆ ಮುನ್ನೊಂದು ತರಲಿಹರು.
ಅಕಟಕಟ ಧಿಃಕಾರ, ಧಿಃಕಾರ ಸ್ತ್ರೀಜನ್ಮಕೆ.
ಇರಲಿರಲಿ ಶ್ರೀರಾಮ ಹೃದಯವನ್ನುವದೇನು ?

ರಾಮ:— ಪ್ರಸಕ್ತಿ ಹೃದಯದಿಂ ತೊಲಗಿಹುದು.

ಸೀತಾ:— ವಂಚಕನೆ ರಾಮ,
ಅಣುರೂಪ ಶಂಕೆಯದು ಪುಟ್ಟುತಲಿ ಹೃದಯದಲಿ
ತೊಲಗಿದುದು ನಿನ್ನದದು ಸೀತೆಗಿಹ ಪ್ರೇಮ.
ರಾವಣನು ಮೋಹಿಸಿದ ನಿಜವಹುದು ರಾಮ.
ಕವಿವರರು ನಿಜವಾಗಿ ವರ್ಣಿಸದ ಪ್ರೇಮ.
ಸತಿಸುತರು ಹಳಿಯುತಿರೆ, ಬಂಧುಗಳು ಬೆಂದುತಿರೆ
ಮುನಿವರರು ಶಪಿಸುತಿರೆ, ಲಂಕೆಯದು ದಹಿಸುತಿರೆ
ರುಂಡಗಳು ಈರೈದು ಮುಂಡದಿಂದುರುಳುತಿರೆ
ಚಲಿಸಿದುದೆ ರಾವಣನ ದಿವ್ಯಪ್ರೇಮ?
ನನ್ನನ್ನೆ ಬಯಸಿದನು; ಪ್ರೇಮವನೆ ಕೋರಿದನು.
ಪ್ರೇಮಶೂನ್ಯನೆ ರಾಮ, ಕಲ್ಲೆದೆಯ ರಾಮ,
ನಾರಿ ನಾಯಾಗಿಹಳೆ? ತ್ಯಜಿಸಲ್ಕೆ ವಿಧಿಯುಂಟೆ?
ಇದುನೋಡು ಕುಹಕ ನಿನ್ನನ್ನೆ ತ್ಯಜಿಸುವೆನು.

( ಚಿತೆಯಲ್ಲಿ ಧುಮುಕುವಳು )

ಎಲೆಜಗವೆ, ಎಲೆಜಗವೆ ಇತ್ತೊಮ್ಮೆನೋಡು.
ನಾರಿ ನಾಯಾಗಿಹಳು ಅನ್ಯಾಯನೋಡು.
ಪುರುಷರೀ ಅನ್ಯಾಯ ಬಹುಕಾಲ ಬಾಳ್ವುದೇ?
ಅಬಲೆಯರು ಜಗದೊಳಗೆ ಅಬಲೆಯರೆ ಚಿರಕಾಲ?
ಎಲೆಜಗವೆ, ಎಲೆಜಗವೆ ಮತ್ತೊಮ್ಮೆ ನೋಡು.
ಬುದ್ಧಿಯಿಂ ಜಾಣ್ಮೆಯಿಂ ಒರೆಹಚ್ಚಿ ನೋಡು.
ಸೀತೆಗಿಹ ಪ್ರೇಮದೊಳು ರಾಮನೋ, ರಾವಣನೋ?

# ಭಿಕ್ಷುಕಿ.

ಭಿಕ್ಷುಕಿ:— ಭಿಕ್ಷಾಂದೇಹಿ! ಭಿಕ್ಷಾಂದೇಹಿ!

( ಅರಸನು ಬೀದಿಯಲ್ಲಿಯು ಇವಳನ್ನು ನೋಡಿ )

ಅರಸ:— ಹಗಲಿರುಳು ಗಣಿಸದಲೆ, ಮಳೆಗಾಳಿಯೆಣಿಸದಲೆ
ಮನೆಮಾರು ನೆನೆಯದಲೆ, ಬಳಗವನು ಕೂಡದಲೆ
ಹರಕು ಸೀರೆಯನುಟ್ಟು, ಮಾಸಿದಾ ತಲೆಬಿಟ್ಟು
ಕರದಿ ಜೋಳಿಗೆ ತೊಟ್ಟು, ಕಣ್ಣೆರಡು ಒಳನಟ್ಟು
ಬೀದಿ ಬೀದಿಯ ಹಿಡಿದು, ಓಣಿ ಓಣಿಯ ಹಿಡಿದು
ಅಲೆದಲೆದು ತಿರುಗುತಿಹ ಭಿಕ್ಷುಕಿಯು ಆರಿವಳು?
ಅಲ್ಲಿಹಳು ನೋಡವಳ ಸೌಂದರ್ಯ ನೋಡು.
ಚೆಲ್ವರಿವ ಮೊಗ ನೋಡು, ಕುಡಿಹುಬ್ಬುಗಳ ನೋಡು;
ಕೆಂಪು ತುಟಿಗಳ ನೋಡು, ನಿಡಿಯ ನಾಸಿಕ ನೋಡು;
ಉದ್ದ ಹೆಳಲನು ನೋಡು, ಉಬ್ಬಿದೆದೆಯನು ನೋಡು;
ಸಣ್ಣ ನಡವನು ನೋಡು, ತೋಳ್ಗಳೆರಡನು ನೋಡು;
ತರುಣಿ ತಾನಾಗಿಹಳು, ಭಿಕ್ಷೆಯನು ಬೇಡುವಳು;
ಬೇಡಿದುದ ಕೊಡಲಿಹೆನು ರಾಣಿ ತಾನಾಗುವಳೇ?
ಸೇವಕನೆ, ಬಾರಿಲ್ಲಿ ಜವದಿಂದಬಾರೊ,
ಭಿಕ್ಷುಕಿಯ ಕರೆತಂದು ನಗೆಮೊಗವದೋರೊ!

( ಸೇವಕನು ಹೋಗಿ ಬೀದಿಯಲ್ಲಿಯ ಭಿಕ್ಷುಕಿಯನ್ನು ಕರೆತಂದು ಅರಸನೆದುರಿಗೆ ನಿಲ್ಲಿಸುವನು )

ಭಿಕ್ಷುಕಿ:— ಏಂದನೆಯು ಮಹರಾಜ ಭಿಕ್ಷುಕಿಯ ಕರೆಸಿರುವೆ?

ಅರಸ:— ಅಹುದಹುದು ಭಿಕ್ಷುಕಿಯೆ ಭಿಕ್ಷೆಯನು ನೀಡಲಿಪೆ.
ಅದಕಾಗಿ ಕರೆಸಿದುದು ಪೇಳುವಿಯಾ ಪೆಸರೇನು?

ಭಿಕ್ಷುಕಿ:— ಭಿಕ್ಷೆಯನು ನೀಡಲ್ಕೆ ಪೆಸರನ್ನು ಕೇಳ್ವುದೆ?

ಅರಸ:— ಇರಲಿರಲಿ ಭಿಕ್ಷುಕಿಯೆ ಪತಿದೇವನಿಹನೆ?

ಭಿಕ್ಷುಕಿ:— ಪತಿದೇವನಿರ್ದೊಡೀ ಜೋಳಿಗೆಯಕಟ್ಟುವೆನೆ?

ಅರಸ:— ತಾಯ್ತಂದೆಗಳು ಜಗದಿ ಬಾಳಿಹರೆ ಭಿಕ್ಷುಕಿಯೆ?

ಭಿಕ್ಷುಕಿ:— ಬಾಳಿಹರು, ಬಾಳಿಹರು ಬಾಳಿರ್ದು ನನಗೇನು?
ಜೋಳಿಗೆಯ ಕೊಟ್ಟಿಹರು, ತಿರಿದುಣಲು ಕಳಿಸಿಹರು.

ಅರಸ:— ಬಿಸಿಲೊಳಗೆ ತಿರುತಿರುಗಿ ಬಾಡಿರುವಿ ಭಿಕ್ಷುಕಿಯೆ;
ಮಳೆಗಾಳಿಯೊಳು ಬಳಲಿ ಬೆಂದಿರುವಿ ಭಿಕ್ಷುಕಿಯೆ;
ಮಜ್ಜನವ ನೀಗೈದು ಭೋಜನವ ಸಲೆಗೈದು
ಜರದುಡುಪು ನೀತೊಟ್ಟು, ವಜ್ರಮುಂಗುರವಿಟ್ಟು
ನನ್ನೆಡಕೆ ನೀ ತೋರು, ಎನಗಾನಂದವನೆ ಬೀರು.

ಭಿಕ್ಷುಕಿ:— ನುಡಿಯದಿರಾಮಾತ ಬೇಡೆನಗೆ ಮಹರಾಜ.
ನೂರೆಂಟು ಮಡದಿಯರು ಗೋಳಿಡುತಲಿರುತಿಹರು
ಭಿಕ್ಷುಕಿಯ ಕರೆತಂದು ಬಂಧನದೊಳಿಡಲಿಹೆಯಾ?
ಬೇಡೆನಗೆ, ಬೇಡೆನಗೆ, ಬೇಡೆನಗೆ ಮಹರಾಜ.

ಸ್ವಾತಂತ್ರ್ಯ ಗುಡಿಸಲೊಳು ತೋಷದಿಂ ಸಾಯುವೆನು.
ಪರತಂತ್ರ ಬಾಳ್ವಿಕೆಯ ಅರಮನೆಯು ಬೇಡೆನಗೆ.
ನಾಕೇಳ್ವ ಭಿಕ್ಷೆಯನು ನೀನರಿಯೆ ಮಹರಾಜ.
ಪೋಗಗೊಡು ಪೋಗಗೊಡು ವಂದಿಸುವೆ ಶಿರಬಾಗಿ.

ಅರಸ:— ಬೇಡಿಮುವ ಕೊಡಲಿಹೆನು ದಿಟವಾಗಿ ಭಿಕ್ಷುಕಿಯೆ;
ರಾಜ್ಯವನು ನಿನಗೀವೆ ಕೇಳಿನ್ನು ಭಿಕ್ಷುಕಿಯೆ.

ಭಿಕ್ಷುಕಿ:— ಆಗದಾಗದು ಪ್ರಭುವೆ ಬೇಡೆನಗೆ ರಾಜ್ಯವದು.
ಐಶ್ವರ್ಯನಾನೊಲ್ಲೆ. ಪೌತ್ರಸಂಪದವಿರಲಿ,
ದಾಸಿಯರು ಬಹಳಿರಲಿ, ಸೇವಕರ ಬಲವಿರಲಿ,
ವಜ್ರಮಾಣಿಕವಿರಲಿ, ಛತ್ರಚಾಮರವಿರಲಿ
ಕಾಲಾಳುಗಳು ಇರಲಿ, ತುರಗ ಗಜ ಭಟರಿರಲಿ
ಬೇಡೆನಗೆ, ಬೇಡೆನಗೆ ಒಡಬಡೆನು ಮಹರಾಜ.
ನಾಕೇಳ್ವ ಭಿಕ್ಷೆಯನು ಭೂಪಾಲ ಕೊಡಲರಿಯ.
ಪ್ರೇಮ ಭಿಕ್ಷೆಯು ಬೇಕು ಭೂಪತಿಯೆ ನೀಡುವಿಯಾ ?

ಅರಸ:— ಆನಂದವೆನಗಾಯ್ತು, ಸಿದ್ಧನಿಹೆ, ಸಿದ್ಧನಿಹೆ.
ಅಪ್ಪುವೆನು ಬಾ! ಬಾ! ಬೇಗದಲಿ ಬಾ! ಬಾ!

ಭಿಕ್ಷುಕಿ:— ಜರದುಡುಪು ತೊಟ್ಟಿಹಿರಿ ಭಂಗಾರವಿಟ್ಟಿಹಿರಿ.
ಬೆಳ್ಳಿ ತಲೆಬುರುಡಿ ನಿಲದೆ ಚಲಿಸುತಿದೆ.
ಮೊಗವೆಲ್ಲ ಬತ್ತಿಹುದು ದೇಹವದು ಬಾಗಿಹುದು.
ಬಚ್ಚಬಾಯನು ತೆರೆದು ಊರಗೋಲನು ಪಿಡಿದು

ಭಿಕ್ಷೆಯನು ನೀಡಲಿರೆ ಸ್ವೀಕರಿಸಲೊಪ್ಪುವೆಸೆ ?
ರಾಟೆಯನು ತಿರುವುತಿಹ, ಖಾದಿಯನು ಧರಿಸುತಿಹ
ನಾರಿಯರನುದ್ಧರಿಪ, ಹಳ್ಳಿಗರನುದ್ಧರಿಪ
ಸ್ವಾತಂತ್ರ್ಯ ಸಮರದಲಿ ಹೋರಾಡಿ ಸಾಯಲಿಹ
ಭಿಕ್ಷುಕಿಯ ಭಿಕ್ಷೆಯನು ಪ್ರೇಮದಿಂ ಬೇಡಲಿಪ
ಯುವಕ ಭಿಕ್ಷುಕನ ಭಿಕ್ಷೆಯಂ ಬೇಡಲಿಹೆ.
ಮಾತಾಡು, ಮಾತಾಡು ನೀಡುವಿಯಾ ಭೂಪಾಲ ?

ಅರಸ:— ವಿಧವೆ ನೀನಾಗಿರುವೆ ತರುಣನಂ ಬಯಸುವುದೆ ?

ಭಿಕ್ಷುಕಿ:— ಆಗದೇತಕೆ ಪ್ರಭುವೆ,
ವಿಧುರನಾಗಲಿ ಪುರುಷ, ಆಗದಿರಲವನು,
ಒಂದಲ್ಲ ಎರಡಲ್ಲ ನೂರೆಂಟು ಸ್ತ್ರೀಯರಂ
ಕೈಪಿಡಿದು ಆಳಲ್ಕೆ ಹಕ್ಕುಂಟು; ವಿಧಿಯುಂಟು.
ವಿಧಿವಶದಿ ತಾನೊಮ್ಮೆ ವಿಧವೆಯಾಗಲು ನಾರಿ
ಕೇಶಗಳ ತೆಗೆದಿಟ್ಟು ಕೆಂಪುಬಟ್ಟೆಯನುಟ್ಟು
ಕೆರೆಗಳಲಿ ಹೊಳೆಗಳಲಿ ತಣ್ಣೀರ ಮುಳುಮುಳುಗಿ
ಕಷ್ಟದಲಿ, ತಾಪದಲಿ ಜೀವನವ ನಡೆಸಲ್ಕೆ
ಎಲ್ಲೆಲ್ಲು ಸ್ತ್ರೀಯರಿಗೆ ಹಕ್ಕುಂಟು, ವಿಧಿಯುಂಟು.
ಅದುನೋಡು ಮಹರಾಜ ಕಣ್ದೆರೆದುನೋಡು.
ವೇಶ್ಯೆಯರ ಬಳಗದಾ ಜೀವನವ ನೋಡು.
ಶಿಶುಹತ್ಯೆಯನು ನೋಡು; ಆತ್ಮಹತ್ಯೆಯ ನೋಡು.
ಕೆರೆಗಳಲಿ, ಹೊಳೆಗಳಲಿ, ಧುಮುಕುತಲಿ, ಮಡಿಯುತಲಿ
ತೇಲುತಿಹ ವಿಧವೆಯರ ಶವಗಳನು ನೋಡು.

ವಿಧವೆಯರ ಜೀವನವು ವಿಪರೀತ ಜೀವನವೆ?
ಎಲ್ಲಿಯದು ಈ ನ್ಯಾಯ, ಪುರುಷರೀ ಅನ್ಯಾಯ!
ಕುರುಡನಾಗಿಹ ಪುರುಷ, ಮಲಗಿಹನು ಆ ದೇವ.
ಎಚ್ಚರಾಗೆಲೆ ದೇವ ವಿಧವೆಯರನುದ್ಧರಿಸು.
ಪುರುಷರಿಗೆ ದಯೆಯಿಲ್ಲ, ಕನಿಕರವು ಎನಿತಿಲ್ಲ.
ಮುಕ್ಕಣ್ಣ ಕೊಡುನಿನ್ನ ಮೂರನೆಯ ಉರಿಗಣ್ಣ,
ಸುಟ್ಟುಹಾಕುವೆನಾನು; ಸಿಡಿದುಸಾಯಲಿಪುರುಷ.
ಮಹದೇವಿ ಕೊಡುನಿನ್ನ ಕರದಲಿಹಖಡ್ಗವನು
ಕಡಿಕಡಿದು ಚೆಲ್ಲುವೆನು; ತುಂಡರಿಸಿ ಕೊಲ್ಲುವೆನು.
ಶ್ರೀಕೃಷ್ಣ ಕೊಡು ನಿನ್ನ ಬೆರಳಲಿಹ ಚಕ್ರವನು
ರುಂಡಗಳ ಚಂಡಾಡಿ ಸಂಹರಿಪೆ ಪುರುಷರನು.
ಮೌನವೇತಕೆ ದೇವ? ಕನಿಕರವು ನಿನಗಿಲ್ಲೆ?
ದುರ್ದೈವವೆನಗಿನ್ನು ಗತಿಯಿಲ್ಲ, ವಿಧಿಯಿಲ್ಲ.
ಇದುನೋಡು ಭೂಪಾಲ ಕಣ್ದೆರೆದು ನೋಡು.
ಮಹಿಳೆಯರ ಮಾನಿನಿಯು, ವಿಧವೆಯರಿಗಾಧಾರ
ಇರಿದುಕೊಳ್ಳುವೆನೋಡು, ನೆತ್ತರವ ನೀ ನೋಡು.
ನೆತ್ತರವ ಕಾರುತಲಿ ಸತ್ತು ಹೋಗಲಿ ಪುರುಷ.
ಅದುನೋಡು ಯಮಧರ್ಮ, ಯಮರಾಜ ಬರುತಿಹನು.
ಬಾ, ಯಮನೆ, ಯಮರಾಜ, ನರಕಕೆಳೆಯಲು ಬಂದೆ?
ಪುರುಷರನ್ಯಾಯವನು ತಡೆಯದಲೆ ಮಡಿಯಲಿಹೆ
ವಿಧವೆ ಭಿಕ್ಷುಕಿಯ ನರಕಕೆಳೆದೊಯ್ವೆಯಾ?
ಪುರುಷನೈ ಯಮನೀನು, ಪಕ್ಷಪಾತಿಯು ನೀನು.
ಇರಲಿರಲಿ ಸರಿಯತ್ತ, ಹಿಂತಿರುಗಿ ಪೋಗತ್ತ.

ಸ್ವರ್ಗವನು ಸೇರುವೆನು: ಶಿವನಡಿಯ ಕಾಣುವೆನು.
ಪೋಗುವೆನು ಪೋಗುವೆನು ವಂದನೆಯು ಮಹಾರಾಜ
ಕೆಳದಿಯೊಳಿ ಕೂಡೆನ್ನ ಹೃದ . . ..

( ಅರಸುಪುತ್ರನು ಒಮ್ಮೆಲೆ ಪ್ರವೇಶಿಸಿ ಅವಳ ಕೈ ಹಿಡಿದ )

ಅ. ಪುತ್ರ:- ಏನಿದೀ ಭಿಕ್ಷುಕಿಯು ಭೀಷಣವು ಪಿತನೆ?
ಅರಸ:— ಪ್ರೇಮಭಿಕ್ಷೆಯಬೇಡಿ ಮಡಿಯಲ್ಕೆ ನಿಂದಿಹಳು.
ಅ. ಪುತ್ರ:- ವಜ್ರಹೃದಯದ ಪಿತನೆ ಸಾಕಿನ್ನು ಅನ್ಯಾಯ!
ಭಿಕ್ಷುಕಿಯೆ, ಸಿದ್ಧನಿಹೆ ಅಭಯವನು ನಾನೀವೆ.
ನಾರಿಯರ, ವಿಧವೆಯರ ಉದ್ಧಾರವನುಗೈದು
ಜೀವನವ ಪಾವನವಗೊಳಿಸಲ್ಕೆ ಸಿದ್ಧನಿಹೆ.

**( ಅರಸುಪುತ್ರ–ಭಿಕ್ಷುಕಿಯರ ವಿವಾಹ ಜರಗುವದು. )**



# ಧರ್ಮ.

೧

ಕೊಲ್ಲದಿಹ ನನಗೆ
ಕಲ್ಲಿನಾರ್ಚನೆಯಂತೆ !
ಸಿರಿಮನೆಯ ಸೋಬತಿಗೆ
ಸೂರ್ಯ ಜಪ ತಪವಂತೆ !

೨

ನಾನೊಲ್ಲದಿಹ ನಾರಿ
ನನಗಾಗಿ ಇಹಳಂತೆ !
ಪಿತನ ನುಡಿ ಮೀರಿ
ನಡೆಯೆ ನರಕವಂತೆ !

೩

ಹೆಣ್ಣಿನಾ ಹಣೆಬರಹ
ಪುರುಷ ಬರೆದುದೆ ಅಂತೆ !
ಇಲ್ಲದೊಡೆ ವಿರಹ
ಅವಳ ಜೀವನಕಂತೆ !

೪

ನನ್ನವರ ನಾನೆಂದು
ಮುಟ್ಟಕೂಡದು ಅಂತೆ !
ಹೊಲೆಯನವನೆಂದು
ಶಾಸ್ತ್ರಶಾಸನವಂತೆ !

೫

ಅಪ್ಪ ಹೇಳುವುದೆಲ್ಲ
ಮೇರುಪರ್ವತವಂತೆ!
ಮೀರಿ ನಡೆವರಿಗೆಲ್ಲ
ನರಕ ಸಿದ್ಧವೆ ಅಂತೆ!

೬

ಕಾಲವರಿಯದ ಧರ್ಮ
ಕುಲಗೇಡಿ ಅಲ್ಲಂತೆ!
ಯುವಕರೆಲ್ಲರ ಧರ್ಮ
ಅವಿಚಾರವಹುದಂತೆ!



# ಕಣ್ಣುಮುಚ್ಚಾಟ !

೧

ಅಜ್ಜ ಕಣ್ಣು ಮುಚ್ಚಿಬಿಟ್ಟ !
ಕೈಯ ಹಿಡಿದು ಕೇಳಿಬಿಟ್ಟ !

೨

" ಇವಳಬಿಟ್ಟು ಇವಳುಯಾರು ?
ಇವನಬಿಟ್ಟು ಇವನುಯಾರು ? "

೩

ಇವಳುಗಂಗೆ, ಇವಳುಗೌರಿ !
ಬ್ರಹ್ಮ, ವಿಷ್ಣು, ರುದ್ರರಿವರು !

೪

" ಹೋಗೆ ಗಂಗಿ, ಹೋಗೆ ಗೌರಿ !
ಹೋಗೊ ಬ್ರಹ್ಮ, ವಿಷ್ಣು, ರುದ್ರ ! "

೫

" ಬಿಟ್ಟೆ, ಬಿಟ್ಟೆ, ಬೆಳಗು ಆಯ್ತು !
ತಟ್ಟೆಮನೆಯು ಹಾಳು ಆಯ್ತು ! "

೬

" ಹಾಳುಗೋಡೆ ದೆವ್ವಬಂತು ! "
ಅಯ್ಯೊ ಅವರ ಹುಡುಕಲೆಂತು ?

೭

ಗಂಗೆಯಿಲ್ಲ, ಗೌರಿಯಿಲ್ಲ!
ಬ್ರಹ್ಮ, ವಿಷ್ಣು, ರುದ್ರರಿಲ್ಲ!

೮

ವನದೊಳಿಲ್ಲ, ಮನೆಯೊಳಿಲ್ಲ!
ಸ್ವರ್ಗ ನರಕದೊಳಗು ಇಲ್ಲ!

೯

ಹೆಣ್ಣಿನಾಟವಾಡಬಂದೆ!
ಮನೆಯ ಕೆಲಸ ಮರೆತು ನಿಂದೆ!

೧೦

ದೇವರನ್ನು ಹುಡುಕ ಹೋದೆ!
ಗಂಡು ಹುಡುಗ 'ಹೆಣ್ಣು' ಆದೆ!



# ‘ಬೇಂದ್ರೆ’ ಯವರ ‘ಗರಿ’

( ಸಾಲ್ಕೈದು ಗೆಳೆಯರು ಕೂಡಿ ಸಾಹಿತ್ಯಕ್ರೀಡೆಯಾಡುತ್ತಲಿದ್ದೆವು ಗೆಳೆಯನೋರ್ವನು ನನಗೆ ಪುಚ್ಛ, ಪಲ್ಲಕ್ಕಿ, ಪರಮೇಶ, ಪರ್ವತ, ಪಟ ಈ ಐದು ಶಬ್ದಗಳನ್ನುಪಯೋಗಿಸಿ ಜನಪದ ಶೈಲಿಯಲ್ಲಿ ಈ ಕೂಡಲೆ ಒಂದು ಪದಕಟ್ಟು ಎಂದ ಆಗ ಹಾಡಿದ ಹಾಡಿದು )

ಪುಚ್ಛವೆಂದೆನಬೇಡ, ಅಚ್ಚಗನ್ನಡವಲ್ಲ |
ಪುಚ್ಛವೆಂಬುದಕೆ ‘ಗರಿ’ಯೆನ್ನು | ಗೆಳೆರಾಯ |
ಹರುಷದಲಿ ಹಾಡು ಹಾಡೇನ || ೧ ||

ಪಲ್ಲಕ್ಕಿಯೇರ್‍ಯಾನ, ಪರಮೇಶಬಂದಾನ |
ಬ್ರಹ್ಮ, ವಿಷ್ಣುಗಳು ಕೂಡ್ಯಾರ | ಗೆಳೆರಾಯ |
ದತ್ತಾವತಾರವಾಗೇದ || ೨ ||

ದತ್ತಮೂರ್ತಿಯನಾಮ, ನರಲೋಕಕತಿಪ್ರೇಮ |
ಅಂಬಿಕಾತನಯಗಿತ್ತಾರ | ಗೆಳೆರಾಯ |
‘ಗರಿ’ ಗವನೆ ಜನ್ಮಕೊಟ್ಟಾನ || ೩ ||

ಗರಿಯೆನಗೆ ಗುರುವಾಯ್ತು, ಪರ್ವತದ ಸಾಲಾಯ್ತು |
ಕೊನೆಯಿಲ್ದ ಕಡಲು ನನಗಾಯ್ತು | ಗೆಳೆರಾಯ |
ಬೇಡಿದುದ ಕೊಟ್ಟು ಕಳಿಸೀತು || ೪ ||

ಗರಿಯಾಗಿ ಹಾರೇನ, ಗಿರಿಯಾಗಿ ಮೆರೆದೇನ ।
ಪಟವಾಗಿ ಮುಗಿಲ ಮುಟ್ಟೇನ । ಗೆಳೆರಾಯ ।
ಪರಶಿವನ ಪಾದ ಕಂಡೇನ ॥ ೫ ॥

ಗರಿಯೆನ್ನ ಬಳಿಗಿರಲಿ, ಗುರುವಿನ ಬಲವಿರಲಿ ।
ಸರಸತಿಯ ವೀಣೆ ನುಡಿತಿರಲಿ । ಗೆಳೆರಾಯ ।
ಹರುಷದಲಿ ಹಾಡು ಹಾಡೇನ ॥ ೬ ॥



# ಗಂಡಸಿನ ' ಹೂಂಕಾರ ' !

ಸೂಳೆಕುದುರೆಯ ಬಿಟ್ಟು
ಮೂಜಗದಿ ಸಂಚರಿಸಿದೆವು ,
ಕಟಿ ಹಾಕುವ ಕಲಿಯು

ಒಬ್ಬನಿಲ್ಲವು ಎಂಬ ಹೆಬ್ಬುಬ್ಬಿನೀ ಚಿಹ್ನ
ಗಂಡಸಿನ ಹೃದಯ ' ಹೂಂಕಾರ '!

ಮುದುಕನಾಹುತಿ ಕೊಟ್ಟು
ಹುಡುಗಿಯ ತಲೆಬುರುಡಿಯನು
ಕೆಂಪು ಬಟ್ಟೆಯೊಳದ್ದಿ

ಪೂರ್ವ–ಪಶ್ಚಿಮದಿ ಮೆರೆಯಿಸಿದೆವೆಂದು
ಗಂಡಸಿನ ಹೃದಯ ' ಹೂಂಕಾರ '!

ಮೂವತ್ತುಮೂರು ಕೋಟಿ
ಕುರಿಗಳನು ಕೂಳಿಲ್ಲದೆಯೆ
ಕೊಂದು, ದೇವತೆಗಳನೆಲ್ಲ

ತುಷ್ಟಪಡಿಸಿದೆವೆಂಬ ಜಯಪತಾಕೆ
ಗಂಡಸಿನ ಹೃದಯ ' ಹೂಂಕಾರ '!

ಭಿಕ್ಷುಕರನೆಲ್ಲ ಬದಿಗಿರಿಸಿ
ಸಾಲದೆಲೆಗಳ ಹಾಸಿ
ಪಂಚಪಕ್ವಾನ್ನಗಳ ಬಡಿಸಿ

ಒಲ್ಲೆವೆನ್ನುತ ಭುಂಜಿಸಿದ ಬಲಭೀಮರೆಂದು
ಗಂಡಸಿನ ಹೃದಯ ' ಹೂಂಕಾರ '!

ಈ ಗಂಡಸರ ಮಂಡಲಕೆ
ಕೊಳ್ಳಿಯ ಕೊಟ್ಟು ಸುಟ್ಟು
ಬಿಡಲಾಯೆಂದು ಯತ್ನಿಸುವೆ ,

ಅದಕೆ ನಾನಲ್ಲದಿನ್ನೋರ್ವ ಕಲಿಯಿಲ್ಲೆಂದು
ಗಂಡಸಿನ ಹೃದಯ ' ಹೂಂಕಾರ '!



# ಸುಖ-ದುಃಖ.

**ಸತಿ:—** ತೇಲು ಮೋಡಗಳ
ತೀಡಿ ಮುಡಿಗಟ್ಟಿ
ಮಲ್ಲಿಗೆ ಮುಡಿದು
ಮುಗುಳುನಗೆ ಚೆಲ್ಲಿ
ಮುಗಿಲುಚೆನ್ನೆಯು
ನೋಡಿ ನಗದಿರ್ಪ
ಕವಿಯು ಕವಿಯೇನೆಂಬೆ!
ಚೆನ್ನ ಚೆನ್ನೆಯನೆ,
ಚೆಲುನಗೆಯನೊಮ್ಮೆ
ಬೀರು, ಸುಪ್ರಭಾತದ
ಸುಮನ ಸಂಚಯದಂತೆ!
ಕಿರುನೃತ್ಯಗೈಯೊಮ್ಮೆ
ಮಧುವನೀಂಟಿ ಮೈ-
ಮರೆತ ಮರಿದುಂಬಿಯಂತೆ!

**ಪತಿ:—** ಕಡಲಿನೊಡಲಿನೊಳು
ನೆಲೆಯ ನಡುವನೆಯಲ್ಲಿ
ಸಿಂಪೆ ಸೆರೆಮನೆಯಲ್ಲಿ

ಸಿಲುಕಿ ಮೌಕ್ತಿಕವು
ಮೊರೆಯಿಡುತಲಿರೆ
ಮನ ಕರಗದಿಹ
ಕವಿಗಾರ್ತಿ ಕಲ್ಲಿಂಜಿ !
ರನ್ನಹೃನ್ಮಯಳಿ ,
ನೀ ನಗುತಲಿರಬೇಕು
ನಾನಳುತಲಿರಬೇಕು
ಸುಖದುಃಖ ಸಮವಂತೆ !
ಇದನೆ ಜಗಜನಕೆ
ತೋರಿ ಸಾರಲಿಬೇಕು
ಕಡಲು–ಬಾನುಗಳಂತೆ !



# ಗೆಳೆಯನ ಗಂಡುಮಗು.

( ನನ್ನ ಗೆಳೆಯನೋರ್ವನಿಗೆ ಗಂಡುಮಗು ಹುಟ್ಟಿತೆಂಬ ವಾರ್ತೆ ಕೇಳಿದಾಗ ಬರೆದು ಕಳಿಸಿದುದು. )

೧

ಗಂಡು ಜನಿಸಿತೇನು ಗೆಳೆಯ,
ಗಂಡು ಗಂಡಸಾಗಲಿ !
ಹಾಲು, ಹಣ್ಣು ಕದ್ದು ತಿಂದು
ಪುಂಡ ಹುಡುಗನಾಗಲಿ !

೨

ಶಾಲೆಗವನ ಅಟ್ಟಿ, ಬಿಟ್ಟು,
ಮನೆಯ ಪಾಠ ಕಲಿಯಲಿ !
ಲತ್ತಿಪೆಟ್ಟು ಹಾಕಿಬಿಟ್ಟು,
ಹುಲಿಯಹೊಡೆವನಾಗಲಿ !

೩

ಕಲ್ಲುಪೂಜೆ ಕಲಿಸಿಬಿಟ್ಟು
ದೇವರಿಲ್ಲವೆಂದುಹೇಳು !
“ ಇರುವನಲ್ಲ ” ವೆನ್ನಲವನು,
ಸತ್ತ ದೇವರೆಂದು ಹೇಳು !

೪

ಹಳೆಯಧರ್ಮ ಹೇಳಿಬಿಟ್ಟ್ರ,
ಧರ್ಮಲಂಡನಾಗಲಿ !
ತಲೆಗೆ ತಡೆಯಗಟ್ಟಿಬಿಟ್ಟ್ರ,
ಬುದ್ಧಿಶಕ್ತಿ ಬೆಳೆಯಲಿ !

೫

ಮದುವೆಗಿದುವೆ ಮಾಡಿಬಿಟ್ಟ್ರ,
ಅವನೆ ಮಾಡಿಕೊಳ್ಳಲಿ !
ಚಿನ್ನ-ಬೆಳ್ಳಿ ಗಳಿಸಿಬಿಟ್ಟ್ರ,
ತಾನೆ ಹೊಟ್ಟೆ ಹೊರೆಯಲಿ !



# ನಾದಭೇದ.

೧

ಢಣಢಣನಾದವು ಕೇಳಿಸಿತೆಂದರೆ,
ದೇವರಪ್ರಾಣವು ಹಾರುವುದು.
ಧರ್ಮಕೆ ಬೆಂಕಿಯು ಬೀಳುವಧು.
ಸೂರ್ಯನ, ಸಾಗರ ನುಂಗುವುದು.
ದೈತ್ಯರ ಮೇಳವು ಕೂಡುವುದು.
ಕಾಲನ ನೃತ್ಯವು ನಡೆಯುವುದು.
ಭೈರವಿರಾಗವು ಕೇಳುವುದು.
ನರಕವು ಸ್ವಾಗತಗೈಯುವುದು.
ಢಣಢಣನಾದವು ಕೇಳಿಸಿತೆಂದರೆ!

೨

ಝಣಝಣನಾದವು ಕೇಳಿಸಿತೆಂದರೆ,
ದೇವರು ಸೇವಕನಾಗುವನು.
ಆಗಸ ಅರಮನೆ ಮಾಡುವನು.
ಇಂದ್ರನು ಆಯುಧಕೊಳ್ಳುವನು.
ಪರ್ವತಪುಡಿಪುಡಿಮಾಡುವನು.
ಕುಬೇರ ನೃತ್ಯವಗೈಯುವನು.
ಚಿನ್ನದಬುಗ್ಗೆಯ ಪುಟಿಸುವನು.
ಕಾಲನು ಕಿಂಕರನಾಗುವನು.

ಪ್ರಾಣದನಿಟ್ಟನು ಒಟ್ಟುವನು.
ಝುಣಝುಣನಾದವು ಕೇಳಿಸಿತೆಂದರೆ !

೩

ಢಣಢಣನಾದಕೆ ಓಡುವುದೇಕೋ ?
ದೇವರಪೂಜೆಯು ಸಾಗಿಹುದು.
ಮಂಗಲಗೀತವು ಕೇಳುವುದು.
ಭಕ್ತಿಯಭಾವವ ತೋರುವುದು.
ಧರ್ಮದಾರತಿಯ ಬೆಳಗುವುದು.
ತನುನೈವೇದ್ಯವ ನೀಡುವುದು.
ಮಕ್ಕಳ ಮಧ್ಯದಿ ಕೂಡುವುದು.
ಉದಯರಾಗವನೆ ಹಾಡುವುದು.
ಆನಂದದಿ ಕುಣಿದಾಡುವುದು.
ಝುಣಝುಣನಾದಕೆ ಕೂಡುವುದೇಕೋ ?



# ತುತೂರಿ.

ಕಾರ್ಮೋಡ ಮುತ್ತಿಗೆಯ ಕಿತ್ತೊಗೆದ
ಅನಂತಾನಂದಮಯಮಾಕಾಶ !
ಗಿರಿಗಹ್ವರಗಳಾಚೆಯಲಿ ಗಗನದಲಿ
ತೇಲಿ ತಿರುಗುತಿಹ ಗಿಳಿವಿಂಡು !
ಸರಸಿಜಳ ಸೆರೆಬಿಟ್ಟು, ಸ್ವರ್ಣೋಜ್ವ-
ಲೋದಯದ ಸುಮಂಗಲ ಪಾಡಿ
ಕುಲುನಗೆಯ ಕುಸುಮಗಳ ಮೂಸಿ
ಮುತ್ತಿಟ್ಟು ಮಧುವನೀಂಟುತಿಹ
ತುಂಬಿಗಳು ! ಏಸಿದಚ್ಚರಿಯಮಮ !
ಕೊನೆಯಿಲ್ಲದಾನಂದಮಯ ಕಡಲು !
ನಭೋಮಂಡಲದಾಚೆಯಲಿ ಏನೊ
ದನಿಯೊಂದು ಕೇಳುತಿದೆ. ಹೃದಯ-
ವನೆ ಕುಲುಕಿ ಚೈತನ್ಯಕನುಮಾಡಿ
ಕೊಡುತಲಿದೆಯೆನ್ನ ತನುವಿನಾಣು
ಪರಮಾಣುಗಳಲಿ ಸ್ಫೂರ್ತಿ ಸ್ಫುಟ-
ಗೊಂಡು ಚಿಮ್ಮುತಿದೆ; ಹೊರಹೊಮ್ಮುತಿದೆ !
ಮಲಗಿ ನಿದ್ರಿಸುವ ಮುಖಹೀನರನು

ಬಡಿದೆಬ್ಬಿಸುವ ಜವ್ವನುದಿಸುತಿದೆ!
ನನ್ನನೆಚ್ಚರಿಸುತಿಹ ದನಿಯದಾವದು?
ಅದುವೆ ಹೊಸಯುಗದ ಹೊಸದಿನದ
ಹೊಸದನಿಯು ಹೊಸ ತುತೂರಿ!



# ಕೊನೆಯಾಶೆ.

ಹೊಸದಿನದ ಹೊಸತುತೂರಿಯ ದನಿ-
ಯು ಹೃದಯವನು ಸೇರೆ, ಕುದಿರಕ್ತ
ತಳಮಳಿಸಲಾ ನವಜನ್ಮನೋತ್ಸಾ-
ಹದಲಿ ಪಂಜರದೊಳಿಹ ಗಿಳಿಯು ಹೊ-
ರಗೆಳೆದು ತೂರಿ ತೇಲಲು ಬಿಟ್ಟು
“ ಸೌಖ್ಯದಾಕಾಶದಲಿ ಮುಗಿಲು-
ಹಣ್ಣುಗಳ ಸವಿದು ಶಾಂತಿಸರಕಿ-
ಳಿಗು ತಿಳಿನೀರನೀಂಟಿ ಸತಿ ಸುತರ
ಕೂಡಿ ಮಾತುಕತೆಯಾಡಿ ಮೆರೆ”
ಯೆಂದ ಸಂದೇಶವನು ತಾಯೆ ನಿನ-
ಗರುಹಲೆಂದು ಧಾವಿಸಿ ಬಂದೆ.
ನಿನ್ನ ಉಪವನದಿ ಪಚ್ಚಗರುಕೆಯ
ಶಾಂತಿ ಶಯ್ಯೆಯಲಿ ಮಲಗಿಹೆ
ನಾದೊಡೇನೆಲೆತಾಯೆ, ನಿನ್ನ
ಮುದ್ದುಕಂದನನೊಮ್ಮೆಯೆ ಒಮ್ಮೆ
ಮ್ಮೈದಡವಿ ಮುದ್ದಿಟ್ಟುಬಿಡು
ಒಡನೆ ಪ್ರಾಣವ ಬಿಡುವೆ ಸಂತಸದಿ.

